# ಭಾಗ್ಯಲಕ್ಷ್ಮಿ

## ವನಿತೆಯರ ಪಾಲಿಗೆ ವರದಾನ

ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಕ್ಕೆ ಹೆಚ್ಚಿನ ಮನ್ನಣೆ ದೊರಕಿಸಿಕೊಡುವ ಉದ್ದೇಶದಿಂದ ಕರ್ನಾಟಕ ಸರ್ಕಾರವು ಕೈಗೊಂಡಿರುವ ಮಹತ್ವದ ಯೋಜನೆ–ಭಾಗ್ಯಲಕ್ಷ್ಮಿ. ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ 31ನೇ ಮಾರ್ಚ್ 2006ರ ನಂತರ ಜನಿಸಿದ ಇಬ್ಬರು ಹೆಣ್ಣುಮಕ್ಕಳಿಗೆ, ಅವರು 18 ವರ್ಷ ವಯಸ್ಸು ತಲುಪಿದಾಗ ರೂ. ಒಂದು ಲಕ್ಷ ಮೊತ್ತವನ್ನು ನೀಡುವುದು ಈ ಯೋಜನೆಯ ಸಾರಾಂಶ.

## ಯೋಜನೆಯ ಮುಖ್ಯಾಂಶಗಳು

- 2006–07ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ ರೂ. 10,850/– ಠೇವಣಿ.
- 2007–08ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ ರೂ. 20,000/– ಠೇವಣಿ. 2008–09ನೇ ಸಾಲಿಗೆ ಇದನ್ನು ಇಮ್ಮಡಿಗೊಳಿಸಲಾಗಿದೆ.
- 31ನೇ ಮಾರ್ಚ್ 2006 ನಂತರ ಬಿಪಿಎಲ್ ಕುಟುಂಬದಲ್ಲಿ ಜನಿಸಿದ ಇಬ್ಬರು ಹೆಣ್ಣುಮಕ್ಕಳು ಈ ಯೋಜನೆಗೆ ಅರ್ಹರು. ಆ ಕುಟುಂಬ 3ಕ್ಕಿಂತ ಹೆಚ್ಚುಮಕ್ಕಳನ್ನು ಹೊಂದಿರಬಾರದು.
- ಒಂದನೇ ತರಗತಿಯಿಂದ ಹತ್ತನೆಯ ತರಗತಿಯವರೆಗೆ ರೂ. 300/– ರಿಂದ ರೂ. 1,000/– ವರೆಗಿನ ವಾರ್ಷಿಕ ವಿದ್ಯಾರ್ಥಿ ವೇತನ.
- 18 ವರ್ಷ ವಯಸ್ಸಿನವರೆಗೆ ರೂ. 25,000/– ರಷ್ಟು ಆರೋಗ್ಯ ವಿಮೆ.
- ದುಡಿಯುತ್ತಿರುವ ತಂದೆ, ತಾಯಿ ಅಥವಾ ಪೋಷಕರ ಸಾವು ಸಂಭವಿಸಿದಲ್ಲಿ ರೂ. ಒಂದು ಲಕ್ಷದವರೆಗೆ ಕುಟುಂಬ ವಿಮೆ.

### ಸ್ತ್ರೀ ಸಬಲೀಕರಣಕ್ಕೆ ವಿನೂತನ ಕ್ರಮ


ಕರ್ನಾಟಕ ವಾರ್ತೆ

# ನಮ್ಮ ಮಾನಸ

ಮೇ 2011

ಸಂಪುಟ : 5 ಸಂಚಿಕೆ : 1



*Editor, Printer and Publisher*
**Rajeshwari H.S.,**
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
**ILA Mudrana**
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*





*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | 8-00 ರೂ. |
| **ವಾರ್ಷಿಕ ಚಂದಾ** (ವಿಶೇಷ ಸಂಚಿಕೆಯೊಂದಿಗೆ) | 100-00 ರೂ. |
| **ಸಂಸ್ಥೆಗಳಿಗೆ** | 150-00 ರೂ. |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

ಪ್ರಾರಂಭ : '**ಮಾನುಷಿ**' (1985ರಲ್ಲಿ),
ಅನಂತರ '**ಮಾನಸ**',
ಈಗ '**ನಮ್ಮ ಮಾನಸ**'




ಸಂಪಾದಕೀಯ

# ಕಾರ್ಮಿಕರನ್ನು ಹತ್ತಿಕ್ಕುವ ಹುನ್ನಾರವೇಕೆ?

ಕಾರ್ಮಿಕರಿಗೆ ಮೇ ದಿನದ ಶುಭಾಶಯಗಳನ್ನು ಹೇಳುವ ಈ ಸಂದರ್ಭದಲ್ಲಿಯೇ ಜಾಗತೀಕರಣದ ಅಬ್ಬರದಲ್ಲಿ, ಐ.ಟಿ/ಬಿ.ಟಿ. ಅಲೆಯಲ್ಲಿ ಕಳೆದು ಹೋಗುತ್ತಿರುವ, ಅಂಚಿಗೆ ಒತ್ತರಿಸಲ್ಪಡುತ್ತಿರುವ ಮಹಿಳಾ ಕಾರ್ಮಿಕರ ಬಗ್ಗೆ ಯೋಚಿಸುವುದು ಅಗತ್ಯವಾಗಿದೆ. ಆಧುನಿಕ ತಾಂತ್ರಿಕತೆಯು ಹಲವಾರು ಉದ್ಯೋಗಗಳನ್ನೂ, ಹಲವಾರು ಬದಲಾವಣೆಗಳನ್ನೂ ಹುಟ್ಟು ಹಾಕಿದ್ದರೂ ನಮ್ಮ ಸುತ್ತ-ಮುತ್ತಲೂ ಆ ಕಾಲದಿಂದಲೂ ಹಲವು ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುವ ಮಹಿಳಾ ಕಾರ್ಮಿಕರಿದ್ದಾರೆ. ನಿತ್ಯ ಜೀವನದ ನಿರ್ವಹಣೆಗಾಗಿ ಇವುಗಳನ್ನೇ ನೆಚ್ಚಿಕೊಂಡು ಜಾಗತೀಕರಣದ ಅಲೆಯಲ್ಲಿ ಮೂಲೆಗುಂಪಾದವರಿದ್ದಾರೆ. ಹೋರಾಟಗಳು, ಚಳವಳಿಗಳ ಧ್ವನಿಗಳು ಕ್ಷೀಣವಾಗುತ್ತಿರುವ ಈ ಸಂದರ್ಭದಲ್ಲಿ ಇಂತಹ ಕಾರ್ಮಿಕರ ಬವಣೆಯ ಬಗ್ಗೆ ಯೋಚಿಸುವುದು ಅಗತ್ಯವಾಗುತ್ತದೆ.

ಜಾಗತೀಕರಣ ತೆರೆದಿರುವ ವಿಶ್ವ ಮಾರುಕಟ್ಟೆಯಲ್ಲಿ ಹಲವಾರು ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರದ ಮಹಿಳೆಯರ ಬದುಕು ಅಸಹನೀಯವಾಗತೊಡಗಿದೆ. ಬಡತನದ ರೇಖೆಯ ಕೆಳಗೆ ಬದುಕುತ್ತಿರುವ ಇಂತಹ ಮಹಿಳಾ ಕಾರ್ಮಿಕರಲ್ಲಿ ಬೀಡಿ ಸುತ್ತುವವರಿದ್ದಾರೆ, ಅಗರಬತ್ತಿ ಹೊಸೆಯುವವರಿದ್ದಾರೆ, ಬೀದಿ ಕಸ ಗುಡಿಸುವವರಿದ್ದಾರೆ, ಹೂ, ತರಕಾರಿ ಮಾರುವವರಿದ್ದಾರೆ, ಗಾರ್ಮೆಂಟ್ಸ್‌ನಲ್ಲಿ ದುಡಿಯುವವರಿದ್ದಾರೆ, ಮೂಗೆತ್ತಿನಂತೆ ದುಡಿಯುವ ಅಂಗನವಾಡಿ ಕಾರ್ಯಕರ್ತೆಯರಿದ್ದಾರೆ, ಮನೆಗೆಲಸದವರಿದ್ದಾರೆ, ಮಗ್ಗ ನೇಯುವವರೂ ಇದ್ದಾರೆ. ಕೃಷಿಯಲ್ಲಿ ಸಾಲ ಬಾಧೆ ತಾಳಲಾಗದೇ ಅಥವಾ ಉದ್ಯೋಗ ದೊರಕದಿದ್ದಾಗ ನಗರ ಪ್ರದೇಶಗಳಲ್ಲಿ ಕಟ್ಟಡ ಕಾರ್ಮಿಕರಾಗಿ ದುಡಿಯುವ ರೈತಾಪಿ ಹೆಣ್ಣುಮಕ್ಕಳೂ ಇದ್ದಾರೆ. ಮನೆಗೆಲಸದವರನ್ನು ಹೊರತು ಪಡಿಸಿದರೆ, ಎಲ್ಲಾ ಕ್ಷೇತ್ರದ ಮಹಿಳೆಯರೂ ಹೆಚ್ಚೆಂದರೆ ದಿನಕ್ಕೆ 100ರಿಂದ 150ರೊಳಗೆ ಸಂಪಾದನೆ ಮಾಡುವಂತಹವರು. ತಿಂಗಳಿಗೆ 3000ದಿಂದ 4000ರೂ ಸಂಪಾದನೆ ಇವರದು. ಮನೆಗೆಲಸದವರು ತಿಂಗಳಿಗೆ 500ರೂ ನಿಂದ 1000 ರೂ ಸಂಪಾದನೆ ಮಾಡಬಹುದು, ಅಷ್ಟೇ. ಅಕ್ಕಿ, ಬೇಳೆ, ತರಕಾರಿಗಳ ಬೆಲೆಗಳು ಗಗನಕ್ಕೇರುತ್ತಿರುವ, ಮನೆ ಬಾಡಿಗೆಯನ್ನು ಕಟ್ಟಲಿಕ್ಕೇ ಆಗದಂತಹ ಇಂದಿನ ಸಂದರ್ಭದಲ್ಲಿ ಈ ಮಹಿಳಾ ಕಾರ್ಮಿಕರ ಬದುಕು ಎಷ್ಟು ಅಸಹನೀಯವಾಗಿರಬಹುದು.

ವಿಶ್ವ ಮಾರುಕಟ್ಟೆಯ ಸಂದರ್ಭದಲ್ಲಿ ಶ್ರಮಶಕ್ತಿಯ ಬಳಕೆ, ಈ ಶ್ರಮಶಕ್ತಿಯಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗಿದೆ ಮತ್ತು ಈ ಹೆಚ್ಚಾದ ಹೆಣ್ಣು ಮಕ್ಕಳ ಸಂಖ್ಯೆಯಿಂದಾಗಿ ಶ್ರಮಶಕ್ತಿಯೇ ಒಂದು ರೀತಿ ಹೆಣ್ತನದ ರೂಪ ಪಡೆದುಕೊಳ್ಳುತ್ತಿದೆ ಎಂದೂ ಹೇಳಲಾಗುತ್ತಿದೆ (feminization of work). ಆದರೆ ಯಾವ ಶ್ರಮಿಕ ವರ್ಗ ಇದರಿಂದ ಲಾಭ ಪಡೆದುಕೊಳ್ಳುತ್ತಿದೆ? ಯಾರು ಬಡತನದ ರೇಖೆಯಿಂದ ಸಾವಿನ ಅಂಚಿಗೆ ತಳ್ಳಲ್ಪಡುತ್ತಿದ್ದಾರೆ?

ಜಾಗತೀಕರಣದಲ್ಲಿ ತೆರೆದುಕೊಂಡಿರುವ ಉದ್ಯೋಗಕ್ಷೇತ್ರದ ಲಾಭ ಪಡೆದುಕೊಳ್ಳುತ್ತಿರುವವರು ಉನ್ನತವರ್ಗದ, ಮಧ್ಯಮವರ್ಗದ ಮಹಿಳೆಯರು. ಅದರಲ್ಲೂ ಐ.ಟಿ./ಬಿ.ಟಿ. ಕ್ಷೇತ್ರದ ಜೆಂಡರ್ ನ್ಯೂಟ್ರಲ್ ಪಾಲಿಸಿಗಳು ಇಂಗ್ಲಿಷ್ ಬಲ್ಲ ವಿದ್ಯಾವಂತ ಮಹಿಳೆಯರನ್ನು ಕೆಲಸದ ಪರಿಧಿಗೆ ಎಳೆಯುತ್ತಿವೆ. ಇಲ್ಲಿಯೂ ಕೂಡಾ 'ಗ್ಲಾಸ್ ಸೀಲಿಂಗ್'ನಂತಹ ಪೂರ್ವಾಗ್ರಹ ಪೀಡಿತ ಪಿತೃಪ್ರಧಾನ ನಿಲುವಿನಿಂದಾಗಿ ಇಲ್ಲಿಯ ಮಹಿಳೆಯರು ನಿರ್ಧರಿತ ಸ್ಥಾನ-ಮಾನಗಳಿಗೆ ಏರಲಾಗದಿದ್ದರೂ, ಪಿತೃಪ್ರಧಾನ ರಚನೆಗಳನ್ನು ಅಲುಗಾಡಿಸುವ ಮಟ್ಟಿಗಿನ ಆರ್ಥಿಕ ಲಾಭ ಪಡೆದಿರುತ್ತಾರೆ. ಕುಟುಂಬ, ಕೆಲಸ, ಮನೆ ಬಗ್ಗೆ ಲಿಂಗಾಧಾರಿತ ಮೌಲ್ಯಗಳ ವಿರುದ್ಧ ಹೋರಾಡಲೇಬೇಕಾದ ಅನಿವಾರ್ಯತೆಯ ಜೀವನಕ್ರಮ ಇವರದು.

ಈ ಕ್ಷೇತ್ರದ ಮಹಿಳೆಯರು ಈ ದೇಶದ 90% ಮಹಿಳೆಯರ ಪ್ರತಿನಿಧಿಗಳಲ್ಲ. ಬೀಡಿ ಸುತ್ತುವ ಮಹಿಳೆಗೆ ಹೊರಗಡೆಯ ಮಾರುಕಟ್ಟೆಯೇ ಗೊತ್ತಿರುವುದಿಲ್ಲ. ಊದುಬತ್ತಿ ಹೊಸೆಯುವ ಮಹಿಳೆ ಕಾರ್ಖಾನೆಯ ಆ್ಯಕ್ಟ್ ಕೆಳಗೆ ಬರುವುದೇ ಇಲ್ಲ. ತರಕಾರಿ-ಹೂ ಮಾರುವ ಮಹಿಳೆಯರು

ನಿತ್ಯ ವ್ಯಾಪಾರ–ವ್ಯವಹಾರಕ್ಕೆ ಬಡ್ಡಿಯ ಸಾಲದ ಮೇಲೆಯೇ ಅವಲಂಬಿತರಾಗಿರುತ್ತಾರೆ. ಮನೆಗೆಲಸದ ಜೊತೆಗೇ ನಡೆಯುವ ಗೃಹ ಆಧಾರಿತ (Home based industries) ಉದ್ಯೋಗಗಳು ಮಹಿಳೆಯರನ್ನು ಮೂರುಹೊತ್ತೂ ದುಡಿಯುವಂತೆ ಪ್ರೇರಿಸುತ್ತವೆ. ಸಾಮಾಜಿಕ ಭದ್ರತೆಯ ಯಾವ ಸವಲತ್ತೂ ಇರದ ಇಂತಹ ಮಹಿಳಾ ಕಾರ್ಮಿಕರು ಆರೋಗ್ಯ, ಮಕ್ಕಳ ವಿದ್ಯಾಭ್ಯಾಸಕ್ಕೆ ತಾವು ನಿತ್ಯ ದುಡಿಯುವ 125 ರೂಗಳನ್ನೇ ನೆಚ್ಚಿಕೊಂಡಿರಬೇಕಾಗುತ್ತದೆ. ಜೊತೆಗೆ ತಮ್ಮ ಬವಣೆಯ ಬಗ್ಗೆ ಒಟ್ಟಾರೆ ಸೇರಿ ಹೋರಾಡುವ ಒಂದು ಅವಕಾಶವೂ ಇವರಿಗೆ ಇರುವುದಿಲ್ಲ. ಗುಜರಾತಿನಲ್ಲಿರುವ 'ಸೇವಾ' ಸಂಸ್ಥೆಯು ಹೀಗೆ ದುಡಿಯುವ ಮಹಿಳೆಯರಿಗಾಗಿಯೇ ಒಂದು ಸಹಕಾರ ಸಂಸ್ಥೆ ಸ್ಥಾಪಿಸಿದೆ. ಮಹಿಳೆಯರ ದುಡಿಮೆ ಹಾಗೂ ಅವರ ಮಾರುಕಟ್ಟೆಯನ್ನು ಅವರೇ ನಿಯಂತ್ರಿಸುವಂತಹ ಒಂದು ಪ್ರಯತ್ನವನ್ನು ಮಾಡಿದೆ. ಸ್ವ–ಸಹಾಯ ಸಂಘಗಳ ಮೂಲಕ ಸಾಲ ಭರಿಸುವ ಹಾಗೂ ಉದ್ಯೋಗಗಳನ್ನು ಮುಂದುವರಿಸಿಕೊಂಡು ಹೋಗುವ ಪ್ರಯತ್ನಗಳನ್ನು ಹೆಣ್ಣುಮಕ್ಕಳು ಮಾಡುತ್ತಿದ್ದಾರೆ. ಬೀಡಿ, ಅಗರಬತ್ತಿ, ಹಪ್ಪಳ ಹೊಸೆಯುವ ಗೃಹ ಆಧಾರಿತ ಉದ್ಯೋಗಗಳಲ್ಲಿ ಸಹಕಾರಿ ಸಂಘಗಳ ಅವಶ್ಯಕತೆ ಇದೆ. ಗುರುತಿನ ಚೀಟಿ, ಆರೋಗ್ಯ ವಿಮೆಯ ಸವಲತ್ತನ್ನು ಸರ್ಕಾರ ನೀಡಬೇಕಿದೆ. ಏಕೆಂದರೆ ಇವು ಕಾರ್ಖಾನೆಯ ಆ್ಯಕ್ಟ್ ಕೆಳಗೇ ಬರುವಂತಹ ಉದ್ಯೋಗಗಳು. ಆದರೆ ಇವರ ಬದುಕನ್ನು ಹಸನಾಗಿಸುವ ರಾಜಕೀಯ ಇಚ್ಛಾಶಕ್ತಿ ಸರ್ಕಾರಕ್ಕೆ ಇಲ್ಲವೇ ಇಲ್ಲ. ಜೊತೆಗೆ ಕೆಲಸದ ಸ್ವರೂಪ ಕೂಡಾ ಸಂಘಟಿತ ಹೋರಾಟಕ್ಕೆ ದಾರಿ ಮಾಡಿಕೊಡುವುದಿಲ್ಲ.

ಒಂದು ಕಡೆ ಹೋರಾಟ ಮಾಡಲಿಕ್ಕೆ ಆಗದಂತಹ ಕೆಲಸದ ಸ್ವರೂಪವಾದರೆ ಗಾರ್ಮೆಂಟ್ಸ್‌ನಲ್ಲಿ ನೀರು ಕುಡಿಯುವುದಕ್ಕೆ ಹಾಗೂ ಶೌಚಾಲಯಕ್ಕೆ ಹೋಗುವುದಕ್ಕೆ ಕೂಡಾ ಹೋರಾಟ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. 1908 ಹಾಗೂ 1911ರಲ್ಲಿ ಸಹಾ ಕೆಲಸದ ಅವಧಿಯನ್ನು ಕಡಿಮೆ ಮಾಡಬೇಕೆಂಬ ಬೇಡಿಕೆಯಿಟ್ಟು ಕಾರ್ಮಿಕರು ಹೋರಾಟ ನಡೆಸಿದ್ದರು. ಒಂದು ಶತಮಾನದ ನಂತರವೂ ಕೆಲಸದ ಅವಧಿಯನ್ನು ಕಡಿತಗೊಳಿಸುವುದಕ್ಕಾಗಿ ಹೋರಾಡುವಂತಹ ಸ್ಥಿತಿ ಇದೆಯೆಂದರೆ ಬಂಡವಾಳಶಾಹಿಗಳ ಹುನ್ನಾರಕ್ಕೆ ಪ್ರಭುತ್ವ/ಸರ್ಕಾರಗಳು ಹೇಗೆ ಬಲಿಯಾಗುತ್ತವೆ ಎಂಬುದನ್ನು ಗಮನಿಸಬಹುದಾಗಿದೆ. ಈಗ ಕಾರ್ಮಿಕರಿಗೆ 8 ಗಂಟೆಯಿಂದ 10 ಗಂಟೆಯ ಕಾಲ ಕೆಲಸ ಹೆಚ್ಚಿಸುವ ಬಗ್ಗೆ ಈಗಾಗಲೇ ಮಾತುಕತೆಗಳು ನಡೆಯುತ್ತಿವೆ. ಬಂಡವಾಳ ಶಾಹಿಗಳಿಗೆ ಶ್ರಮಶಕ್ತಿಯೇ ಬೆನ್ನೆಲುಬಾಗಿರುವುದರಿಂದ ಲಾಭ ಹೆಚ್ಚಳಕ್ಕಾಗಿ ಇಂತಹ ಪ್ರಯತ್ನಗಳು ನಡೆಯುತ್ತಿವೆ. ಚಾರಿತ್ರಿಕ ಹೋರಾಟದ ಮಹತ್ವವನ್ನು ತಿರಸ್ಕರಿಸಿ ಬಂಡವಾಳಶಾಹಿಗಳಿಗೆ ಮಣಿಯುವ ಸರ್ಕಾರ/ಪ್ರಭುತ್ವದ ನಿಲುವನ್ನು ನಾವು ಧಿಕ್ಕರಿಸಬೇಕಾಗುತ್ತದೆ.

ಹೋರಾಟ ಮಾಡಲಾಗದಂತಹ ಒತ್ತಡಗಳನ್ನೂ ಪ್ರಭುತ್ವ ಹೇರುತ್ತದೆ. ಅಂಗನವಾಡಿ ಮಹಿಳೆಯರ ಹೋರಾಟಕ್ಕೆ ಪ್ರತಿಕ್ರಿಯಿಸಿದ ಸರ್ಕಾರ ಹೋರಾಟದಲ್ಲಿ ತೊಡಗಿರುವವರನ್ನು ಕೆಲಸದಿಂದ ವಜಾಗೊಳಿಸುತ್ತೇವೆ ಎಂದು ಬೆದರಿಕೆಯನ್ನೊಡ್ಡಿ ಹೋರಾಟದ ಮೂಲಭೂತ ಹಕ್ಕನ್ನೇ ಮೊಟಕುಗೊಳಿಸಿದ್ದಲ್ಲದೆ, ಯಾವುದೇ ಹೋರಾಟಕ್ಕೆ ಕಾನೂನಿನ 'ಅನುಮತಿ' ತೆಗೆದುಕೊಳ್ಳಬೇಕೆಂಬ ನಿಯಮವನ್ನು ಹೇರಿ ಕಾರ್ಮಿಕರ ಧ್ವನಿಯನ್ನು, ಚಳವಳಿಯ ಬೆಂಬಲವನ್ನು ಮುರಿದುಹಾಕುವ ಪ್ರಯತ್ನ ಮಾಡುತ್ತಿದೆ. ಕಾರ್ಮಿಕ ಸಂಘಟನೆಗಳು ಅಸ್ತಿತ್ವಕ್ಕೆ ಬರದಂತೆ ಅಥವಾ ಇರುವ ಕಾರ್ಮಿಕ ಸಂಘಟನೆಗಳ ಜೊತೆ ಸಂಪರ್ಕ ಕಡಿದುಕೊಳ್ಳುವಂತೆ ಕಾರ್ಮಿಕರ ಮೇಲೆ ಒತ್ತಡವನ್ನು ಹೇರಲಾಗುತ್ತಿದೆ.

ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಬಂಡವಾಳ ಶಾಹಿಗಳಿಗೆ ಅಗ್ಗದ ಶ್ರಮಶಕ್ತಿಯಾಗಿ ಬಳಕೆಯಾಗುತ್ತಿರುವ ಹಾಗೂ ಸಾಂಪ್ರದಾಯಿಕ ಉದ್ಯೋಗಗಳಿಗೇ ಅಂಟಿಕೊಂಡು ಬವಣೆ ಅನುಭವಿಸುತ್ತಿರುವ ಮಹಿಳಾ ಕಾರ್ಮಿಕರಿಗೆ ಮಹಿಳಾಚಳವಳಿ ಹಾಗೂ ಕಾರ್ಮಿಕ ಚಳವಳಿಯ ಬೆಂಬಲ ಅಗತ್ಯವಾಗಿದೆ. ಬಡತನದ ರೇಖೆಯ ಕೆಳಗೆ ಬದುಕುತ್ತಿರುವ ಮಹಿಳಾ ಕಾರ್ಮಿಕರಿಗೆ ಕಾನೂನು ರಕ್ಷಣೆ, ಆರೋಗ್ಯ ಭದ್ರತೆ, ಮಕ್ಕಳ ವಿದ್ಯಾಭ್ಯಾಸದ ಹೊಣೆ ಹಾಗೂ ಕನಿಷ್ಠ ವೇತನದಂತಹ ಮೂಲಭೂತ ಬೇಡಿಕೆಗಳನ್ನು ಪ್ರಭುತ್ವ/ಸರ್ಕಾರಗಳು ಈಡೇರಿಸುವಂತೆ ಒತ್ತಾಯಪಡಿಸುವ ಅಗತ್ಯವಿದೆ.

ಎಲ್ಲ ಬವಣೆಗಳ ನಡುವೆಯೂ ಕಾರ್ಮಿಕ ದಿನಾಚರಣೆಗಾಗಿ ನಗುನಗುತ್ತಲೇ ಸಿದ್ಧವಾಗುವ ಕಾರ್ಮಿಕ ಮನಸ್ಸುಗಳಿಗೆ ಅಭಿನಂದನೆಗಳು.

* * *

ಈ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡಮಿಯ ಗೌರವ ಪ್ರಶಸ್ತಿಗೆ ಭಾಜನರಾದ ಸ. ಉಷಾ ಅವರಿಗೆ, ಪುಸ್ತಕ ಬಹುಮಾನಗಳನ್ನು ಪಡೆದುಕೊಳ್ಳುತ್ತಿರುವ ಡಾ. ಬಿ.ಎನ್. ಸುಮಿತ್ರಾಬಾಯಿ ಹಾಗೂ ಡಾ. ಎಚ್.ಎಲ್. ಪುಷ್ಪ ಅವರಿಗೆ ಮಾನಸದ ಅಭಿನಂದನೆಗಳು.

ಕರ್ನಾಟಕ ಸಾಹಿತ್ಯ ಅಕಾಡಮಿಯ ಗೌರವಕ್ಕೆ ಭಾಜನರಾದ ಮಾನಸದ ಹಿತೈಷಿಗಳಾದ ಕೆ.ರಾಮಯ್ಯ, ಡಾ. ಎಚ್.ಎಸ್.ರಾಘವೇಂದ್ರರಾವ್ ಅವರಿಗೂ ಮಾನಸದ ಅಭಿನಂದನೆಗಳು.

## ಒಳಗಿನ ಪುಟಗಳಲ್ಲಿ....



*ಈ ಸಂಚಿಕೆಯ ಪ್ರಾಯೋಜಕರು:*

ಕೆ.ಎಸ್. ಪಾರ್ಥಸಾರಥಿ

### ಓದುಗರಲ್ಲಿ ಮನವಿ

ಜಾಗತೀಕರಣದ ಇಂದಿನ ಸಂದರ್ಭದಲ್ಲಿ 'ನಮ್ಮ ಮಾನಸ'ದಂತಹ ಸಣ್ಣ ಪತ್ರಿಕೆಗೆ ಓದುಗರೇ ಜೀವಾಳ. ಪತ್ರಿಕೆಗೆ ಚಂದಾದಾರರಾಗುವ ಮೂಲಕ ಹಾಗೂ ಈ ವರ್ಷದ ಚಂದಾ ನವೀಕರಿಸುವ ಮೂಲಕ ಪತ್ರಿಕೆಯ ಪ್ರಕಟಣೆಗೆ ಸಹಕಾರ ನೀಡಿ.

# ಕನ್ನಡ ಜನಪದ ಕವಿಗಳು ಕಂಡ ದ್ರೌಪದಿ

■ ಡಾ. ಬಿ.ಎನ್. ಸುಮಿತ್ರಾಬಾಯಿ

'ದ್ರೌಪದಿ' ಎಂಬ ಪುರಾಣ ಸ್ತ್ರೀ ಪತೀಕವು (Archetype) ಎಷ್ಟು ನಿಗೂಢತೆ ಮತ್ತು ಸಂದಿಗ್ಧ ಲಕ್ಷಣಗಳನ್ನು ಹೊಂದಿದೆ ಎಂದರೆ ಸ್ವತಃ ವ್ಯಾಸರಚಿತ ಮಹಾಭಾರತದಲ್ಲೇ ಆಕೆ ಏಕಶಿಲಾಕಾರದ ಮೂರ್ತಿಯಾಗಿಲ್ಲ. ಅವಳ ಹುಟ್ಟು, ಮದುವೆ, ಸಂಸಾರ, ಸಾವುಗಳು ಎಲ್ಲದರಲ್ಲೂ ಅಸಾಧಾರಣತೆಯೇ ಮುಖ್ಯಲಕ್ಷಣ. ಕೆಲವೆಡೆ ಅವಳನ್ನು ದೇವತಾಂಶ ಸಂಭೂತೆ ಎಂದು ವ್ಯಾಸರು ವಿವರಿಸಲು ಯತ್ನಿಸಿದ್ದರೂ, ಭೂಮಿಯಲ್ಲಿ ಅವಳು ಮರ್ತ್ಯಾತಿಮರ್ತ್ಯ ಸಂಕಟಗಳನ್ನು ಅನುಭವಿಸಲೆಂದೇ ಬಂದಂತಿದ್ದಾಳೆ ಮತ್ತು ಅವಳ ಭಂಗ, ಬವಣೆಗಳ ಜೊತೆಗೆ ಅವಳ ನಿಷ್ಠೆ ಕೂಡ ಸಾವಿನ ನಂತರವೂ ಪ್ರಶ್ನಾರ್ಹವೆಂಬಂತೆ ಚಿತ್ರಿಸಲಾಗಿದೆ.

ರಾಷ್ಟ್ರವ್ಯಾಪ್ತಿಯ ಮಹಾಕಾವ್ಯವಾದ ಮಹಾಭಾರತದ ಅಭಿಜಾತ ಕಥಾವಸ್ತು ಭಾರತದ ಬೇರೆ ಬೇರೆ ಪ್ರಾಂತೀಯ ಹಾಗೂ ಭಾಷಿಕ ಸಂಸ್ಕೃತಿಗಳಲ್ಲಿ ವೈವಿಧ್ಯಮಯ ರೂಪಗಳಲ್ಲಿ ಮರುರಚನೆಗೊಂಡಿದೆ. ಕನ್ನಡದಲ್ಲಿ ಶಿಷ್ಟಕವಿಗಳ ಮೇಲೆ ರಾಮಾಯಣಕ್ಕಿಂತ ಮಹಾಭಾರತದ ಪ್ರಭಾವವೇ ಹೆಚ್ಚಾಗಿದೆ. ಜನಪದ ಕವಿಗಳೂ ಈ ಮಹಾಭಾರತದ ಆವೃತ್ತಿಗಳನ್ನು ತಮ್ಮ ತಮ್ಮ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಮರುರಚಿಸಿರುತ್ತಾರೆ.

ಈ ಜನಪದ ಮಹಾಭಾರತ ಪಠ್ಯಗಳ ಒಂದು ಎದ್ದು ತೋರುವ ಲಕ್ಷಣವೆಂದರೆ ಈ ಪಠ್ಯಗಳ ಹಾಡುಗಾರರು 'ದ್ರೌಪದಿ'ಯ ವ್ಯಕ್ತಿತ್ವದ ಬಗ್ಗೆ ಮೂಲ ಮಹಾಭಾರತದ ಸಂದಿಗ್ಧತೆಗಳೆಲ್ಲಕ್ಕೂ ತಮ್ಮದೇ ರೀತಿಯ ಸರಳ ಪರಿಹಾರವನ್ನು ಕಂಡುಕೊಂಡಿರುತ್ತಾರೆ. ಜನಪದ ಕವಿಗಳ ದೃಷ್ಟಿಯಲ್ಲಿ 'ದ್ರೌಪದಿ' ಸಾಕ್ಷಾತ್ ಪಾರ್ವತೀದೇವಿ, ಆದಿಶಕ್ತಿಯೇ ಆಗಿದ್ದಾಳೆ. ಶಿವನ ಆಜ್ಞೆಯಂತೆ, ಅವಳು ಐವರಿಗೆ ಪತ್ನಿಯಾಗಲು ದ್ರುಪದನ ಮಗಳೆಂದು ಯಜ್ಞಕುಂಡದಲ್ಲಿ ಹುಟ್ಟುತ್ತಾಳೆ.

ಹೀಗೆ ಎಷ್ಟೋ ಬಗೆಯ ನಿಗೂಢತೆಗಳಿಗೆ ಜನಪದ ಕವಿಗಳು ಉತ್ತರ ಕಂಡುಕೊಂಡಿರುವುದರ ಹಿಂದೆ ದ್ರೌಪದಿ- ಕರಗ-ಆರಾಧನಾ ವಿಧಿಯ ಧಾರ್ಮಿಕ ಆಚರಣೆಯ ಪ್ರಭಾವವಿದೆ. ಮೂಲದಲ್ಲಿ ತಮಿಳುನಾಡಿನ ದಕ್ಷಿಣ ಆರ್ಕಾಟ್ ಪ್ರದೇಶದಲ್ಲಿರುವ 'ವನ್ನಿಯಕುಲ ಕ್ಷತ್ರಿಯ'ರೆಂದು ತಮ್ಮನ್ನು ಗುರುತಿಸಿಕೊಳ್ಳುವ ತಿಗಳ ಜನಾಂಗದವರ ಧಾರ್ಮಿಕ ಆರಾಧನೆಯ ವಿಧಿ ದ್ರೌಪದೀದೇವಿ ಕರಗೋತ್ಸವ.



ಕರ್ನಾಟಕದಲ್ಲಿ ಬಂದು ನೆಲೆಗೊಂಡ ತಿಗಳರ ಮೂಲಕ ಇಲ್ಲೂ ಈ ಆರಾಧನೆ ಬೆಳೆಯಿತು. ಕನ್ನಡದ ಬಹುಮುಖ್ಯ ಜನಪದಕಾವ್ಯಗಳ ಸಾಲಿಗೆ ಸೇರುವ 'ಜನಪದ ಭಾರತ'ವು ಈ ನಾಡಿನ ರೈತಾಪಿ ಜನಸಂಸ್ಕೃತಿಯಲ್ಲಿ ಮೂಡಿಬಂದ, ಇಡೀ ಮಹಾಭಾರತ ವೃತ್ತಾಂತವನ್ನು ಹೇಳಲು ಯತ್ನಿಸುವ ಮಹತ್ವಾಕಾಂಕ್ಷೆಯನ್ನು ಹೊಂದಿರುವ ಪಠ್ಯವಾಗಿದೆ. *(ಹಾಡಿರುವವರು: ಬೆಟ್ಟದ ಬೀಡಿನ ಸಿದ್ದಯ್ಯಶೆಟ್ಟಿ, ಸಂಪಾದಕರು: ಡಾ. ಪಿ.ಕೆ. ರಾಜಶೇಖರ, ಹೊನ್ನಾರು ಜನಪದ ಗಾಯಕರು, ಮೈಸೂರು, 2004)*

ಈ ಕಾವ್ಯದಲ್ಲಿ ದ್ರೌಪದಿಯ ಹುಟ್ಟನ್ನು ವಿವರಿಸಲಿಕ್ಕೇ ಒಂದು ಪರ್ವವಿದೆ. ಅದೇ 'ದ್ರೋಪತಿ ಜರಣದ ಪರ್ವ.' ಈ ಪರ್ವದ ಆರಂಭದಲ್ಲಿ ಬರುವ ಆದಿಶಕ್ತಿಯ ಸ್ತೋತ್ರದಲ್ಲಿಯೇ ಕವಿಯು ದ್ರೌಪದಿ-ಆದಿಶಕ್ತಿಯರ ಸಂಬಂಧದ ಪುರಾಣ ಐತಿಹ್ಯವನ್ನೂ ಹಾಡಿರುತ್ತಾನೆ.

**'ಒಲಿದು ಬಾರಮ್ಮಯ್ಯ ಒಲಿದುಬಾರೆ**
**ವನ್ನಿಯ ಕುಲದೇವಿ ಒಲಿದುಬಾರೆ'**

ಎಂದು ಆರಂಭವಾಗುವ ಈ ಸ್ತುತಿಯಲ್ಲಿ ದ್ರೌಪದಿಯನ್ನು ಆದಿಪರಾಶಕ್ತಿ, ಆದಿಮಹಾಶಕ್ತಿ, ಕಾಳಿಕಾತ್ಯಾಯಿನಿ, ಮಾತೆ ದುರ್ಗಾದೇವಿ, ಚಾಮುಂಡೇಶ್ವರಿ, ಪಾರ್ವತಿ, ಜಗದಂಬ, ಎಲ್ಲಮ್ಮ, ತ್ರೈಮೂರ್ತಿಗಳ ತಾಯಿ ಎಂಬ ವಿಶೇಷಣಗಳಿಂದ ಹೊಗಳಿ ಪ್ರಾರ್ಥಿಸಲಾಗುತ್ತದೆ. ಜೊತೆಗೆ ತಾಮ್ರಕೇಶಿದಾನವ (ಮಹಿಷಾಸುರನ ಕೋಶಾಧಿಕಾರಿ)ನನ್ನು ಮುಟ್ಟಿಕೊಂಡದ್ದರಿಂದ ಪಾರ್ವತಿಗೆ ಮೈಲಿಗೆಯಾಯ್ತು. ಅದರಿಂದ ಅಗ್ನಿಯಲ್ಲಿ ಮಿಂದು ಶುದ್ಧಿಗೊಳ್ಳ ಬೇಕಾಯಿತು. ಬೇರೊಂದು ಜನ್ಮದಲ್ಲಿ ವರಾಕಾಂಕ್ಷಿಯಾಗಿ ಶಿವನನ್ನು ಕುರಿತು ತಪಸ್ಸು ಮಾಡಿದ್ದಳು. ಆಗ ಪ್ರತ್ಯಕ್ಷವಾದ ಶಿವನ ಎದುರಲ್ಲಿ 'ಪತಿಭಿಕ್ಷಾಂದೇಹಿ' ಎಂದು ಐದುಬಾರಿ ಹೇಳಿದ್ದರಿಂದ ಶಿವನು 'ತಥಾಸ್ತು' ಎಂದನು. ಹಾಗಾಗಿ ಅವಳು ಐವರ ಪತ್ನಿಯಾಗಲೇಬೇಕಾಯಿತು. ದ್ರುಪದ ರಾಜನು ದ್ರೋಣನಿಂದ ಆದ ಅವಮಾನಕ್ಕೆ ಪ್ರತೀಕಾರ ಬಯಸಿ ಶಿವನನ್ನು ಕುರಿತು ಯಜ್ಞ, ಜಪ, ತಪಗಳನ್ನು ನಡೆಸಿದನು. ಶಿವನು ಪ್ರತ್ಯಕ್ಷನಾಗಲು **ಮೂರು ಲೋಕದ ಗಂಡ/ ಅರ್ಜುನ ದೇವನು/ ಅಳಿಯನು ಆಗಬೇಕು/ ಅರ್ಜುನ ವೀರನಿಗೆ/ ಹೆಂಡತಿಯಾಗುವಂತೆ/ಮಗಳನ್ನು ಕೊಡಬೇಕು'** ಎಂದು ಪ್ರಾರ್ಥಿಸಿದನು. ಆಗ ಯಜ್ಞಕುಂಡದಿಂದ ಹೊಮ್ಮಿ ಬಂದ ಪಾರ್ವತಿ 'ಅಗ್ಗುನಿಯಮಿಂದು' 'ಸುದ್ದವಾಗಿ' 'ದ್ರುಪತನ ಮಗಳಾಗಿ' 'ಮ್ಯಾಲೆದ್ದು ಬಂದಳು.'

ಶಿವನ ಲೀಲೆಯ ಭಾಗವಾಗಿ ಪಾರ್ವತಿಯೇ ದ್ರೌಪದಿಯೆಂದು ಪ್ರತಿಪಾದಿಸುವ ಮೂಲಕ, ಮೂಲ ಮಹಾಭಾರತದಲ್ಲಿ ದ್ರೌಪದಿಯ ಸಂಬಂಧದಲ್ಲಿ ಎದುರಾಗುವ ಪೂರ್ವಜನ್ಮದ ಕಥೆಗಳೊಳಗಿನ ಅಸಾಂಗತ್ಯವನ್ನೆಲ್ಲ ತೊಡೆದುಹಾಕಿದ ರೀತಿಯಲ್ಲಿ ಜನಪದ ಕವಿಪ್ರತಿಭೆ 'ದ್ರೌಪದಿ'ಗೆ ಸಹಜ ಹಾಗೂ ವಿಶಿಷ್ಟ ಶಕ್ತಿಯ ನೆಲೆಯೊಂದನ್ನು ಕಟ್ಟಿಕೊಡುತ್ತದೆ ಎಂಬುದನ್ನು ಗಮನಿಸಬೇಕು. ಈ ನೆಲೆಯಿಂದಲೇ ಈ ಕವಿಗಳು ದ್ರೌಪದಿಯ ಬದುಕಿನ ಎಲ್ಲ ಪ್ರಸಂಗಗಳನ್ನೂ ಚಿತ್ರಿಸುತ್ತಾರಾಗಿ, ಆಕೆಗೆ ಎಲ್ಲೂ ಯಾರಿಂದಲೂ ಸೋಲು, ಅವಮಾನಗಳೇ ಎದುರಾಗುವುದಿಲ್ಲ! ಎದುರಾದರೂ ತಾನೇ ಗೆಲ್ಲಬಲ್ಲಳು. ಎಂಥದೇ ಕಷ್ಟ ಎಡರು ತೊಡರುಗಳಿದ್ದರೂ ಅವಳು ಲೀಲಾಜಾಲವಾಗಿ ಎದುರಿಸಿ ಗೆಲ್ಲುತ್ತಾಳೆ. ಅವಳೇ ತನ್ನ ಗಂಡಂದಿರನ್ನೂ ಕಾಪಾಡಿಕೊಳ್ಳುತ್ತಾಳೆ. ಹೇಗೆಂಬುದನ್ನು ಅರಿಯಲು ನಾವು ಜನಪದ ಮಹಾಭಾರತ ಪಠ್ಯಗಳನ್ನು ಗಮನಿಸಬೇಕು.

ಈ ಮೊದಲು ಪ್ರಸ್ತಾಪಿಸಿದ 'ಜನಪದ ಮಹಾಭಾರತ'ವಲ್ಲದೆ *'ಪಾರ್ಥನ ಜೋಗೀಹಾಡು' (ಸಂ. ಡಾ.ಪಿ.ಕೆ. ರಾಜಶೇಖರ, ಹೊನ್ನಾರು ಜನಪದ ಗಾಯಕರು, ಮೈಸೂರು, 2004);* 'ದ್ರೌಪದಿ' *(ಹಾಡಿದವರು ಭದ್ರಾವತಿ ತಾಲೂಕು ಕಿಕ್ಕೇರಿ ಗ್ರಾಮದ ದ್ಯಾವಕ್ಕ: ಸಂ. ಮೈಲಿಗಳ್ಳಿ ರೇವಣ್ಣ, ಕನ್ನಡ, ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1984)* ಹಾಗೂ 'ದ್ರೋಪದಿಯ ಹಾಡು' *(ಬುಲಾಯಿ ಹಾಡುಗಳು: 'ಜನಪದ ಹಾಡುಗಳಲ್ಲಿ ಮಹಾಭಾರತ: ಸಂ. ಕ.ರಾ.ಕೃ)* ಎಂಬ ಇತರ ಮೂರು ಪಠ್ಯಗಳನ್ನು ಇಲ್ಲಿ ವಿಶ್ಲೇಷಣೆಗೆ ಆರಿಸಿಕೊಂಡಿದೆ. ಈ ಪಠ್ಯಗಳ ಪೈಕಿ 'ಪಾರ್ಥನ ಜೋಗೀಹಾಡು' ಪೂರ್ಣವಾಗಿ ಜನಪದ ಕಲ್ಪನೆಯಲ್ಲೇ ಮೂಡಿರುವ, ಅರ್ಜುನನ ಪ್ರೇಮ-ಸಾಹಸದ ರಮ್ಯಕಥೆಯನ್ನು ಹೊಂದಿದ್ದು, ಅದಕ್ಕೂ ಮಹಾಭಾರತದ ಆಖ್ಯಾನಕ್ಕೂ ಇರುವ ಸಂಬಂಧವೆಂದರೆ ಅರ್ಜುನ, ದ್ರೌಪದಿ ಹಾಗೂ ಚಿತ್ರಾ (ಚಿತ್ರಾಂಗದೆ) ಮತ್ತು ಉಲೂಪಿ (ಇಲ್ಲಿ ಕುಸುಮಾಲೆ) ಎಂಬ ಪಾತ್ರಗಳ ಹೆಸರುಗಳು ಮಾತ್ರ. ಅರ್ಜುನನು ಸಂನ್ಯಾಸಿಯಾಗಿ ತೀರ್ಥಯಾತ್ರೆಗೆ ಹೋದಾಗ ನಾಗಕನ್ಯೆ ಉಲೂಪಿ ಮತ್ತು ಮಣಿಪುರದ ರಾಜಪುತ್ರಿ ಚಿತ್ರಾಂಗದೆಯರನ್ನು ಗಾಂಧರ್ವವಿವಾಹ ಮಾಡಿ ಕೊಂಡಿದ್ದನೆಂಬ ಕಥಾಂಶ ಮಾತ್ರ 'ಪಾರ್ಥನ ಜೋಗೀಹಾಡಿನ' ಕಥೆಯ ಒಂದು ಮುಖ್ಯ ಎಳೆಯಾಗುತ್ತದೆ. ಮತ್ತು ಸಿದ್ದಯ್ಯಶೆಟ್ಟರು ಹಾಡಿರುವ 'ಜನಪದ ಮಹಾಭಾರತ'ದಲ್ಲಿ ಈ ಇಡೀ ಕಾವ್ಯದ ರೂಪಾಂತರವೊಂದನ್ನು ಸುದೀರ್ಘವಾಗಿ ರಚಿಸಿರುವುದನ್ನು ಕಾಣಬಹುದು. ಈ ಎರಡೂ ಪಠ್ಯಗಳು ಕೃಷಿ ಪ್ರಧಾನ ಸಂಸ್ಕೃತಿಯಿಂದ ಹೊಮ್ಮಿ ಬಂದಂಥವೂ ಆಗಿವೆ.

'ದ್ರೌಪದಿ' ಹಾಗೂ 'ದ್ರೋಪತಿಯ ಹಾಡು' ಹೆಣ್ಣುಮಕ್ಕಳು ಹಾಡಿರುವಂಥವು. ಇವುಗಳ ಪೈಕಿ 'ದ್ರೌಪದಿ' ಎಂಬ (ದ್ಯಾವಕ್ಕನ) ಹಾಡಿನಲ್ಲಿ ಸಭಾಪರ್ವ ರಾಜಸೂಯಯಾಗದ ಪರಿಣಾಮವಾಗಿ ದ್ರೌಪದಿಯ ಮೇಲೆ

ದುರ್ಯೋಧನನ ಮೋಹ-ಮಾತ್ಸರ್ಯ ಮುಂತಾದ ಶಿಷ್ಟಕಾವ್ಯದ ವೃತ್ತಾಂತಗಳನ್ನು ಬಿಟ್ಟು ದ್ರೌಪದಿ ಪಾಂಡವರೊಂದಿಗೆ ಓಕುಳಿಯಾಡಿದ ಪ್ರಸಂಗವೇ ದುರ್ಯೋಧನನ ಮಾತ್ಸರ್ಯ-ದ್ವೇಷಗಳ ಮೂಲವೆಂದು ಕಲ್ಪಿಸಿರುವುದು ಗಮನಾರ್ಹ. ಇಲ್ಲೂ ಪಗಡೆಯಾಟವಿದೆ. ಆದರೆ ಇದು ಪಾಂಡವರಿಂದ ದ್ರೌಪದಿಯನ್ನು ಕಸಿದುಕೊಳ್ಳಲಿಕ್ಕಾಗಿ ದುರ್ಯೋಧನ ಹೂಡಿದ ಕುತಂತ್ರ, ಇದಕ್ಕೆ ಪ್ರೇರಣೆ ಕೊಡುವವಳು ಅವನ ತಾಯಿ ಗಾಂಧಾರಿ! ಚಿತ್ರದುರ್ಗದ ಆಸುಪಾಸಿನಲ್ಲಿ ಪ್ರಚಲಿತವಿರುವ ಹಾಡು ಇದು.

'ಬುಲಾಯಿ ಹಾಡುಗಳು' ಬೀದರ ಜಿಲ್ಲೆಯಲ್ಲಿ ಪ್ರಚಾರ ದಲ್ಲಿರುವಂಥವು. ಇವುಗಳ ಭಾಗವಾದ 'ದ್ರೋಪತಿಯ ಹಾಡು' ವಿಶಿಷ್ಟ ರೀತಿಯ ಅಲ್ಲಿನ ಪ್ರಾದೇಶಿಕ ಭಾಷೆಯ ಸೊಗಡುಳ್ಳದ್ದು. ಇಲ್ಲಿ ಸಾಧುವಿನಂತೆ ಮಾರುವೇಷ ತೊಟ್ಟು ಪಾಂಡವರ ಮನೆಗೆ ಭಿಕ್ಷೆಗೆ ಹೋದ ದರ್ಯೋಧನ, ಭಿಕ್ಷೆ ನೀಡಲು ಬಂದ ದ್ರೌಪದಿಯ ರೂಪಕ್ಕೆ ಮರುಳಾಗಿ ಮನೆಗೆ ಬಂದು ಊಟ, ನಿದ್ದೆ ಬಿಟ್ಟು ಕೊರಗುತ್ತಾನೆ. ತಾಯಿ ಗಾಂಧಾರಿಯೋ ಅವನ ದುಃಖದ ಕಾರಣ ಕೇಳಿತಿಳಿದು ಪಾಂಡವರನ್ನು 'ಕಾರಣ'ಕ್ಕೆ ಕರೆಸುವಂತೆ ಸಲಹೆ ನೀಡುತ್ತಾಳೆ. ಔತಣಕ್ಕೆಂದು ಬಂದ ಧರ್ಮರಾಯನನ್ನು ಪುಸಲಾಯಿಸಿ ಪಗಡೆಯಾಟಕ್ಕೆ ಸೆಳೆದು ಸೋಲಿಸುತ್ತಾರೆ ದುರ್ಯೋಧನ ಮತ್ತು ಅವನ ಕಡೆಯವರು. ಈ ಹಾಡಿನಲ್ಲೂ ಈ ಮೊದಲು ಪ್ರಸ್ತಾಪಿಸಿದ 'ದ್ರೌಪದಿ' ಎಂಬ ಹಾಡಿನಲ್ಲೂ ದ್ರೌಪದಿಯೇ ಶಕುನಿಯೊಂದಿಗೆ ಪಗಡೆಯಾಟವಾಡಿ ಧರ್ಮರಾಯ ಸೋತಿದ್ದೆಲ್ಲವನ್ನೂ ತಾನು ಗೆದ್ದುಕೊಡುತ್ತಾಳೆ! ಹೆಣ್ಣುಮಕ್ಕಳು ಹಾಡಿರುವ ಈ ಹಾಡುಗಳಲ್ಲಿ ದ್ರೌಪದಿಗೆ (ಆದಿಶಕ್ತಿಯಾದ್ದರಿಂದ) ಗೆಲ್ಲಲು ಸಾಧ್ಯವಾಗುತ್ತದೆ. ಆದರೆ 'ಜನಪದ ಮಹಾಭಾರತ' ಮತ್ತು 'ಪಾರ್ಥನ ಜೋಗೀಹಾಡು'ಗಳಲ್ಲಿ ದ್ರೌಪದಿಯು ಪಗಡೆಯಾಡುವುದರಲ್ಲಿ ಅರ್ಜುನನನ್ನೂ ಮೀರಿಸಬಲ್ಲ ನಿಪುಣೆಯಾಗಿದ್ದಾಳೆ. ಅವಳ ಸಾಮರ್ಥ್ಯಕ್ಕಿಂತ ಕೃಷ್ಣಪರಮಾತ್ಮನ ಸಹಾಯದಿಂದಲೇ ಅವಳಿಗೆ ಸಮಸ್ಯೆ ಪರಿಹರಿಸಲು ಸಾಧ್ಯವಾಗುತ್ತದೆ.

ಜನಪದ ಕವಿಮನಸ್ಸುಗಳು ಕಲ್ಪಿಸಿರುವ ಪಾಂಡವರು ಗಂಡಸರು ಹಾಡಿರುವಂಥ ಕಾವ್ಯಗಳಲ್ಲಿ ಮಹಾವೀರರೇ ಆದರೂ ಅವರ ಜೀವನಧಾಟಿ, ಜೀವನ ಕ್ರಮಗಳು ಹಳ್ಳಿಗಳ ಜಮೀನುದಾರರ ರೀತಿಯನ್ನೇ ಹೋಲುವಂಥವು. ಉತ್ತರಭಾರತದವರ ಸೂರ್ಯ-ಚಂದ್ರವಂಶಗಳ 'ರಜಪೂತ'ರ ಪುರುಷಾಧಿಪತ್ಯದ ಪಿತೃಪ್ರಧಾನ ರಾಜಕೀಯಾರ್ಥಿಕ ವ್ಯವಸ್ಥೆಗಿಂತ ಭಿನ್ನವಾದ ಸಾಂಸ್ಕೃತಿಕ ಪರಿಸರದಲ್ಲಿ ಇಲ್ಲಿನ ಪಾಂಡವರಿದ್ದಾರೆ. ದ್ರೌಪದಿಯ ವಸ್ತ್ರ ಅಕ್ಷಯವಾಗುವಂತೆ ಕೃಷ್ಣನು ಮೊದಲೇ ವರವೊಂದನ್ನು ದ್ರೌಪದಿಗೆ ನೀಡಿರುತ್ತಾನೆ. ಅರ್ಜುನ-ಸುಭದ್ರೆಯರ ಮಗ ಅಭಿಮನ್ಯುವಿನ ಹುಟ್ಟಿದ ಹಬ್ಬಕ್ಕೆಂದು ದ್ವಾರಕೆಯಿಂದ ಕೃಷ್ಣ ಪರಮಾತ್ಮ ಇಂದ್ರಪ್ರಸ್ಥಕ್ಕೆ ಬಂದಿರುತ್ತಾನೆ. ಊಟೋಪಚಾರಗಳಾದ ಮೇಲೆ ಮಾತುಕತೆಯಾಡುತ್ತಲೇ ಹಣ್ಣೊಂದನ್ನು ಚಾಕುವಿನಿಂದ ಕತ್ತರಿಸುತ್ತಿದ್ದ ಕೃಷ್ಣನ ಕೈಗೆ ಗಾಯವಾಗಿ ರಕ್ತ ಸುರಿಯತೊಡಗುತ್ತದೆ. ಸುಭದ್ರಾದಿಯಾಗಿ ಎಲ್ಲರೂ ಏನೂ ತೋಚದೆ ನಿಂತಿದ್ದಾಗ ದ್ರೌಪದಿ ಥಟ್ಟನೆ ತನ್ನ ಸೀರೆಯ ಸೆರಗನ್ನು ಹರಿದು ಕೈಗೆಕಟ್ಟಿ ರಕ್ತವನ್ನು ಸುರಿಯದಂತೆ ತಡೆಯುತ್ತಾಳೆ. ಅವಳ ನಿರ್ವ್ಯಾಜ ಪ್ರೀತಿಯನ್ನು ಮೆಚ್ಚಿದ ಕೃಷ್ಣ ಹೇಳುತ್ತಾನೆ:

**ಸೆರಗಿನಲ್ಲಿ ಪಟ್ಟೆ ಕಟ್ಟಿ ತಂಗ್ಯಮ್ಮ**
**ಕಷ್ಟಕೆ ನೀ ಒದಗಿ ಬಂದೆ**
**ಕಷ್ಟಕ್ಕೊದಗಿದ ಸೆರಗ ಎಷ್ಟು ಹೊಗಳಿದರೇನು**
**ಅಕ್ಷಯವಾಗಲಮ್ಮ-ನಿನ ಸೆರಗು**
**ಅಕ್ಷಯವಾಗಲಮ್ಮ**
**ಕೆಟ್ಟ ಮನಸಲ್ಲಿ ನಿನ್ನ-ವಸ್ತ್ರಾಕೆ**
**ಕೈಯಿಟ್ಟರೆ ಪಾಪಿಗಳು**
**ಮುಟ್ಟಿದ ಆ ದುಷ್ಟರ ಹುಟ್ಟಡಗಿ ಹೋಗಲಿ**
**ಇಂಥ ವರ ಕೊಟ್ಟಿರುವೆನು ತಂಗ್ಯಮ್ಮ**
**ನಿನಗಿಂಥ ವರ ಕೊಟ್ಟಿರುವೆನು.**

*(ದ್ರೋಪತಿ ಸೆರಗು ಕಟ್ಟಿದ ಪರ್ವ, 'ಜನಪದ ಮಹಾಭಾರತ')*

ಈ ಕಥೆ 'ಕೃಷ್ಣನ ಕಾಪಿ'ನ ಕಥೆಗೆ ಒಂದು ಜಾನಪದೀಯ ಆವರಣ ಹಾಗೂ ಕಾರಣವನ್ನು ಕಟ್ಟಿಕೊಡುತ್ತದೆ. ಆದರೆ ದ್ರೌಪದಿಯ 'ಮಾನಭಂಗ'ದ ಘಟನೆ ಘಟಿಸಲೇಬೇಕಾದದ್ದಾಗಿರುತ್ತದೆ. ದುರ್ಯೋಧನ ದ್ರೌಪದಿಯ ರೂಪಕ್ಕೆ ಮೋಹಗೊಳ್ಳುವುದೇ ಜನಪದ ಭಾರತಗಳಲ್ಲಿ ಜೂಜಿನ ಕಾರಣ, (ಅರ್ಜುನ ಜೋಗಿಯಾಗಿ ಅಲೆದ ಹಾಡಿನ ಕಥೆಯು ಹೆಣ್ಣಿಗೆ ಪತಿಯೇ ಸರ್ವಸ್ವ, ಮದುವೆಯಾದ ಪತ್ನಿಯರನ್ನು ಗಂಡನು ಸುಖವಂಚಿತರನ್ನಾಗಿ ಮಾಡುವುದು ತಪ್ಪು. ಆದ್ದರಿಂದ ಧರ್ಮಪತ್ನಿಯಾದ ದ್ರೌಪದಿಯು ಅರ್ಜುನನನ್ನು ಪ್ರಾಣಕ್ಕೂ ಮಿಗಿಲಾಗಿ ಪ್ರೀತಿಸುತ್ತಿದ್ದರೂ, ಅವನ ಅನ್ಯಸ್ತ್ರೀ ರಮಣತ್ವದ ಬಗ್ಗೆ ಎಷ್ಟೇ ಕೋಪ, ಅಸಮಾಧಾನವಿದ್ದರೂ, ಅವರೆಲ್ಲ ಅವನನ್ನು ಮದುವೆ ಯಾಗಿಯೂ ಪತಿ ಸುಖವಿಲ್ಲದೆ ಬರಡುಬಾಳು ಬಾಳುತ್ತಿದ್ದಾರೆಂದು ತಿಳಿದಾಗ ಸವತಿಯರಾದ ಚಿತ್ರ-ಕುಸುಮಾಲೆಯರನ್ನೂ ಕ್ಷಮಿಸುತ್ತಾಳೆ. ಒಪ್ಪತ್ತು ಅವರೊಡನೆ, ಒಪ್ಪತ್ತು ತನ್ನೊಡನೆ ಗಂಡನು ದಾಂಪತ್ಯ ನಡೆಸಲೆಂದು ಒಪ್ಪಿಕೊಳ್ಳುತ್ತಾಳೆ ಎಂಬಂತೆ ಈ ಕಾವ್ಯಭಾಗವು ಪ್ರತಿಪಾದಿಸುತ್ತದೆ.)

ದ್ರೌಪದಿಯ ಪ್ರೇಮಪಾಶದಿಂದ ಹೊರಹೋಗಿ, ತನಗಾಗಿ ತಪಿಸುತ್ತಿರುವ ಆ ನಾಗಕನ್ನೆಯರನ್ನು ಸೇರಲು ಅರ್ಜುನ ಜೋಗಿಯಾಗಿ ಮನೆ ಬಿಡಬೇಕಾಗಿದೆ. ಅದಕ್ಕೆ ತಕ್ಕ ಕಾರಣವನ್ನು ಸೃಷ್ಟಿಸಲು ಅವನು ಉಪಾಯಮಾಡಿ ದ್ರೌಪದಿಯನ್ನು ಪಗಡೆಯಾಟಕ್ಕೆ ಆಹ್ವಾನಿಸುತ್ತಾನೆ. 'ನೀನು ಗೆದ್ದರೆ ನನ್ನ ಮುತ್ತಿನಪೆಂಡೆಯನ್ನು ಕಳೆದು ನಿನ್ನ ಪಾದಕ್ಕೆ ಕಟ್ಟುವೆ. ಸೋತರೆ, ನಾಗರಾಜನ ಹೆಣ್ಣು ಮಕ್ಕಳ ಬಳಿ ಹನ್ನೆರಡುವರ್ಷ ನೀನು ಅವರ ಗೌಡಿಯಾಗಿದ್ದು ನೀರು ಹೊರಬೇಕು' ಎಂಬ ಷರತ್ತನ್ನು ವಿಧಿಸುತ್ತಾನೆ. ಮೊದಲಲ್ಲಿ ಅವನು ವಂಚಿಸಿ, ಅವಳ ಕೈಗೆ ಹೊಡೆದು ದಾಳಗಳನ್ನು ದೋಚಿಕೊಂಡು ಗೆದ್ದೆನೆಂದು ಸಾಧಿಸುತ್ತಾನೆ. ಆದರೆ ದ್ರೌಪದಿ ಪ್ರಾರ್ಥನೆಯಿಂದ ಕೃಷ್ಣ ಅಲ್ಲಿಗೆ ಬ್ರಾಹ್ಮಣನಾಗಿ ಬಂದು ಸಾಕ್ಷಿ ನಿಂತಮೇಲೆ ದ್ರೌಪದಿಯೇ ಪಗಡೆ ಗೆಲ್ಲತೊಡಗುತ್ತಾಳೆ. ಕೊನೆಗೆ ಕೃಷ್ಣನು ಮಾಯೆಯಿಂದ ನಾಗಕನ್ನೆಯರಂತೆ ಅರ್ಜುನನೆದುರು ಕಾಣಿಸಿಕೊಂಡು, ಅವನ ಗಮನಸೆಳೆದು ಅವನೇ ಸೋತನೆಂದು ಒಪ್ಪಿಕೊಳ್ಳುವಂತೆ ಮಾಡಿ 'ಯೋಗವಿಲ್ಲದಮ್ಯಾಲೆ ಜೋಗಿಯಾಗೋಗಯ್ಯ' ಎಂದು ಅರ್ಜುನನ್ನು ಛೇಡಿಸುತ್ತಾನೆ. ಗೆದ್ದ ಭರದಲ್ಲಿ ದ್ರೌಪದಿಯೂ ನನ್ನ ಜೊತೆ **"ದಾಯಮಾಡ್ತಾ ಬೇರೆ ಯಾರನ್ನೋ ನೆನೆದಿರಿ/ನಿಮಗೆ ದಾಯವೇಕೆ, ಬ್ರಾಹ್ಮಣ ಹೇಳಿದ ಹಾಗೆ ರಾಜ್ಯಬಿಟ್ಟು ಆನಂದ ಜೋಗಿಯಾಗಿ"** ಎಂದು ಹಾಸ್ಯಮಾಡುತ್ತಾಳೆ. ಅದನ್ನೇ ಕಾದಿದ್ದ ಅರ್ಜುನ **'ಹೆಣ್ಣೆ, ನಾವು ಕ್ಷತ್ರಿಯರು/ಸತೀ ಆಡಿದ ಮಾತ ಪತಿ ಮೀರಬಾರ್ದು/ ಪತೀ ಆಡಿದ ಮಾತ ಸತಿ ಮೀರಬಾರ್ದು/ನೀನಾಡುವಂತ ಮಾತ ನಾನು/ ನೆರವೇರಿಸಿ ಬರ್ತೀನ್ಹೆಣ್ಣೆ ಪರಮಾತ್ಮನ ಪಾದಸಾಕ್ಷಿ ಈ ಮಾತಿಗೆ/ಹೆತ್ತ ತಾಯವ್ವ ಸಾಕ್ಷಿ'** ಎಂದು ವೀರಪ್ರತಿಜ್ಞೆ ಮಾಡಿ ಹೊರಟೇಬಿಡುತ್ತಾನೆ!

ಒಳ್ಳೆಯ ಮಾತಿನಲ್ಲಿ ಪಾಂಡವರನ್ನು ಊಟಕ್ಕೆ ಕರೆದು, ಉಪಾಯದಿಂದ ಜೂಜಿಗೆ ಸೆಳೆದು, ಧರ್ಮರಾಜ ಜೂಜಾಡಿ ಸೋತಾಗ,

ದುರ್ಯೋಧನ ತಮ್ಮ ದುಶ್ಯಾಸನನನ್ನು ಕರೆದು ಧರ್ಮರಾಜನ ತಮ್ಮಂದಿರನ್ನು, ದ್ರೌಪದಿಯನ್ನು ತನ್ನ ದರಬಾರಿಗೆ ಕರೆತರುವಂತೆ ಅಪ್ಪಣೆ ಮಾಡುತ್ತಾನೆ. ದ್ರೌಪದಿ ಧರ್ಮರಾಯನನ್ನು ಕುರಿತು **'ನೀವು ಸೋತ ಮೇಲೆ ನನ್ನನ್ನು/ ಜೂಜಿಗೆ ಈಡುಕಟ್ಟಿದ್ದೀರಿ/ ಆ ಕಾರಣದಿಂದ ನಾನು ಸೊತಂತ್ರಳು/ನಾನು ಮಾತ್ರ ಕೌರವನ ದರಬಾರಿಗೆ ಬರೋಳಲ್ಲ'** ಎಂದು ಹೋಗಲು ನಿರಾಕರಿಸುತ್ತಾಳೆ. ಆ ಮಾತಿಗೆ ಧರ್ಮರಾಯ ಮೆಚ್ಚಿ ತಲೆದೂಗಿದರೆ, ಭೀಮನು ಸಾಭಾಸ್ ಎಂದು ತನ್ನ ತೊಡೆತಟ್ಟಿ ಹೇಳುತ್ತಾನೆ. ದ್ರೌಪದಿಯನ್ನು ಕರೆತರಲೇ ಬೇಕೆಂದು ದುರ್ಯೋಧನ **'ರಾಜ್ಯವನ್ನು ಕಳುಕೊಂಡ ಪರದೇಸಿಗಳಿಗೆ ಯಾವ ನಾರೀರೂ ಸತಿಯರಲ್ಲ/ ಅಂಥ ನಾರಿಗೆ ಅವರು ಗಂಡರಲ್ಲ/ ರಾಜ್ಯವಾಳುವ ರಾಜನೆ ಗಂಡ'** ಎಂದು ತನ್ನದೇ ನೀತಿಹೇಳಿ 'ಅವಳನ್ನು ಎಳೆದುಕೊಂಡು ಬಾ' ಎಂದು ಅಪ್ಪಣೆಮಾಡುತ್ತಾನೆ.

**"ನಿನ್ನ ಐವರ ಆಗ್ನೆಯಲ್ಲಿ/ನನ್ನ ಅಣ್ಣನಾದ ಕೌರವೇಶ್ವರನ ಇಷ್ಟದಂತೆ/ನಮ್ಮ ಅಣ್ಣನ ದರ್ಬಾರಕ್ಕೆ ಮರುವಾದಿಯಿಂದ ಬಂದ್ರೆ ಸರಿ/ಬಾರದೇ ಚಂಡೀ ಮಾಡೋದಾದ್ರೆ/ನಿನ್ನ ಜಡಾಮುಡಿಯನ್ನು ಹಿಡ್ದು ಧರಾದರ್ನೆ ಸೆಳ್ಕೊಂಡೋಯ್ತೀನಿ"** ಎಂದು ದುಶ್ಯಾಸನ ಆಗ್ರಹಿಸಿದರೆ ದ್ರೌಪದಿ, **"ಎಲೋ ದುರಾತ್ಮ/ ನೀನು ಗರ್ಜತ್ಯವನ್ನು ಮಾಡಿದ ಮಾತ್ರಕ್ಕೆ ನಾನು ಹೆದ್ರೋಳಲ್ಲ/ ಮೊದಲು ನನ್ನ ಮಾತನ್ನು ಆಲಿಸು/ನನ್ನ ಪತಿದೇವ್ರು ಜೂಜಿನಲ್ಲಿ/ಸಕಲ ಸಾಮ್ರಾಜ್ಯ ದಂಡುದಾಳಿ ತಮ್ಮಂದಿರು/ಅನಂತ್ರ ತಮ್ಮನ್ನೂ ಸೋತು/ ಅವ್ರು ನಿಮ್ಮ ಸೋದೇನಲ್ಲಿರುವಾಗ/ನನ್ನನ್ನು ಜೂದಿಗೆ ಈಡು ಕಟ್ಟುವ ಅಧಿಕಾರ ಅವರಿಗಿಲ್ಲ/ಆ ಕಾರ್ಣದಿಂದ ನಾನು ಸೊತಂತ್ರಳು/ಆ ಕಾರ್ಣದಿಂದ ಬೇರೆ ಮಾತಾಡದೆ ಇಲ್ಲಿಂದ ತೊಲಗು"** ಎಂದು ಪ್ರತಿವಾದಿಸುತ್ತಾಳೆ.



ದುಶ್ಯಾಸನ ಜಗ್ಗದೆ ಅವಳ ಮುಡಿ ಹಿಡಿದು ಎಳೆದು ಕೊಂಡೇ ಹೋಗುತ್ತಾನೆ. ಅಲ್ಲೂ ದುರ್ಯೋಧನನ ಜೊತೆ ವಾದ ವಿವಾದ ನಡೆದು, ಅವನು ಅವಳನ್ನು ಹಿಡಿಸಲು ಯತ್ನಿಸಿ ದುಶ್ಯಾಸನ ಅವಳ ಸೆರಗಳೆಯತೊಡಗಿದಾಗ, ಕೃಷ್ಣ ನೀಡಿದ್ದ ವರ ನೆನಪಾಗಿ ಅವಳು ಅವನನ್ನು ಸ್ಮರಿಸುತ್ತಾಳೆ. ವಸ್ತ್ರ ಅಕ್ಷಯವಾದಂತೆ ಸೆಳೆಸೆಳೆದು ಸೋತು ಉರುಳುತ್ತಾನೆ. ದ್ರೌಪದಿ ತನಗಿಷ್ಟು ಅವಮಾನ ಅನ್ಯಾಯ ಆಗುತ್ತಿದ್ದರೂ ನೋಡಿಕೊಂಡು ಸುಮ್ಮನಿದ್ದ ಗುರು ಹಿರಿಯರೆಲ್ಲರನ್ನೂ ಕರುಣಾಜನಕವಾಗಿ ಪ್ರಶ್ನಿಸುತ್ತಾ **'ನಾನು ಗೋಳಾಡ್ತಿದ್ರೂ ನೀವು ಕಲ್ಲುಗೊಂಬೆಗಳಂಗೆ ಕುಂತಿದ್ರಲ್ಲ/ನೀವು ಗುರುಗಳೆ? ನೀವು ಹಿರಿಯರೆ?/ನೀವು ದೊಡ್ಡವರೆ? ನೀವು ಯೋಗ್ಯರೆ?/ನಿಮಗೆ ನ್ಯಾಯಧರ್ಮ ಅನ್ನೋದು ಗೊತ್ತೆ?'** ಎಂದು ತನ್ನ ಪತಿಗಳನ್ನೂ ತರಾಟೆಗೆ ತೆಗೆದುಕೊಳ್ಳುತ್ತಾಳೆ.

ಆಗ ಭೀಷ್ಮರು **'ದ್ರೋಪತಿ ಮಾಪತುರೋತೆ/ಅವಳು ಧರ್ಮರಾಯನಿಂದ ನಿನ್ನ ಸೋದೇನಕ್ಕೆ ಬಂದಿಲ್ಲ/ಅವಳ ಪತುರೋತ ಧರ್ಮವ/ಮಾನಾಡದ ಸಭೆಯವ್ರೆಲ್ಲ ಕಂಡುದ್ದಾಯ್ತು/ಈಗ ನೀನು ಮಾಡಿರುವ ಪ್ರತಾಪವೇ ಸಾಕು'** ಎಂದು ದುರ್ಯೋಧನನಿಗೆ ತಿಳಿಯ ಹೇಳುತ್ತಾರೆ. ಆಗ ಸಕುನಿ **"ದ್ರೋಪತಿ ಒಬ್ಬಳು ಸೋತಿಲ್ಲ ಅನ್ನೋದಾದ್ರೆ/ ಅವುಳೇ ಪಕಡೆ ಆಡಿ ಅವುಳ ಗಂಡಂದಿರನ್ನು ಗೆದ್ದು ಕೊಳ್ಳಲಿ"** ಎಂದು ಸೂಚಿಸುತ್ತಾನೆ. ಭೀಷ್ಮ, ವಿದುರರೂ **"ದ್ರೋಪತಿ ನೀನು ಪಕಡೆ ಆಡಿ ಗೆದ್ದು/ನಿನ್ನ ಗಂಡಂದಿರ ಬಿಡಿಸ್ಕೋ ತಾಯಿ"** ಎಂದು ಹೇಳುತ್ತಾರೆ. ಅದೇ ರೀತಿಯಲ್ಲಿ ದ್ರೌಪದಿ ಪಗಡೆ ಆಡುವ ವಿಶಿಷ್ಟಸಂದರ್ಭ ಕುತೂಹಲಕರ ವಾಗಿದೆ.

**"ಆದಿ ಪರಾಶಕ್ತಿ ದ್ರೋಪತಾದೇವಿ/ಪಕಡೆ ಹಾಸುನ ಮುಂದೆ ಕುಂತ್ಕೊಂಡ್ಳು/ ಸಕುನಿ ಮಾರಾಜನ ಗ್ವಾರಂದ ನಡುಗೋಯ್ತು/ಅವುನ ಹೇಳ್ದಂಗೆ ಕೇಳ್ತಿದ್ದ ದಾಳಗಳು/ ಸಕುನಿಗೆ ನಾಲಗೆ ಬಿದ್ದೋದಂಗಾಗಿ/ಏನು ಕೇಳಬೇಕು ಅನ್ನೋದ ಕೇಳಕಾಗ್ದೆ/ಲಕ್ವ ಹೊಡೆದಂತಾಗಿ ದುದುದುದು ಅಂದ್ನೇ ಹೊರ್ತು/ದುಗಾ ಅನ್ನಕ್ಕೆ ಆಗ್ನೇ ಇಲ್ಲ/ ಆದಿಪರಾಶಕ್ತಿ ದ್ರೋಪತಾದೇವಿ ನೋಡ್ತಿದ್ದಾಳೆ/ಸಕುನಿ ಬಾಯ್ಕಟ್ಟೋಗಿ ಕೈಕಟ್ಟೋಗಿ/ ದ್ರೋಪತಾದೇವಿಯೇ ಪಕಡೆ ಗೆದ್ಕೊಂಡ್ಳು?"** ಎಲ್ಲರೂ ಅವಳ ಗೆಲುವಿನಿಂದ ಆನಂದಿಸುತ್ತಾರೆ.

ಆದರೆ ಧರ್ಮರಾಯ ಮಾತ್ರ **'ನಾವು ಸೋತಿರೋ ನಮ್ಮ ಪತ್ನಿಯು/ ನಮ್ಮನಾದ್ರೆ ಗೆದ್ದುಕೊಡುವ ಬಗೆಯು ಹೇಗಾಯ್ತು?/ಈ ನ್ಯಾಯವ ನಾನು ಒಪ್ಪಲಾರೆ'** ಎಂದು ಚಿಂತೆ ಮಾಡುತ್ತಾನೆ. ಶಕುನಿ ಈ ಸಂಧಿಯನ್ನೇ ಬಳಸಿಕೊಂಡು **'ನೀನು ನಿನ್ನ ಹೆಂಡ್ತಿ ಗೆದ್ದಿರೋದ ಒಪ್ಪುದೇ ಇದ್ರೆ/ ನೀನೇ ಒಂದಾಟ ಆಡಿ ನಿನ್ನ ಸಕಲ ಸಾಮ್ರಾಜ್ಯ ದಂಡುದಾಳಿ ಮಂದಿ ಮಾರ್ಬಲನೆಲ್ಲ ಗೆಲ್ಲಬವುದು'** ಎಂದು ಉಪಾಯ ಸೂಚಿಸುತ್ತಾನೆ. ಮತ್ತೆ ಜೂಜಿಗೆ ಕೂತ ಧರ್ಮರಾಯ ಎಲ್ಲವನ್ನೂ ಎಲ್ಲರನ್ನೂ ಹಿಂದಿನಂತೆಯೇ ಸೋತುಕೊಂಡು ವನವಾಸ, ಅಜ್ಞಾತವಾಸಗಳ ಪ್ರತಿಜ್ಞೆ ತೀರಿಸಲು ತಮ್ಮಂದಿರು ಮತ್ತು ಪತ್ನಿಯ ಜೊತೆ ಹೊರಡುತ್ತಾನೆ, ಪತ್ನಿಯು ತಮ್ಮನ್ನು ದಾಸ್ಯದಿಂದ ಪಾರುಮಾಡಿದಳೆಂದು ಒಪ್ಪುವುದಕ್ಕಿಂತ ಆ ಪತ್ನಿ-ತಮ್ಮಂದಿರ ಜೊತೆ ಕಾಡುಪಾಲಾದರೂ ಸರಿ, ಅದೇ ಗೌರವ ಎನ್ನುತ್ತದೆ ಧರ್ಮರಾಯನ ಗಂಡು ಮನಸ್ಸು.

ಪಾಂಡವರು ವನವಾಸದಲ್ಲಿದ್ದಾಗ ತನ್ನ ದರ್ಪ ವೈಭವ ಮೆರೆಸಲು ಸೈನ್ಯಸಮೇತ ಕಾಡಿಗೆ ಹೋದ ದುರ್ಯೋಧನ ಚಿತ್ರಸೇನ ಗಂಧರ್ವನ

ಮಾಯಾಪಾಶಗಳಿಂದ ಬಂಧಿತನಾದಾಗ, ಆ ಕಟ್ಟು ಕಳಚಲು ಪತಿವ್ರತೆಯೊಬ್ಬಳು ತನ್ನ ಪಾದವನ್ನು ಸೋಕಿಸಿದರೆ ಆ ಪಿಚಂಡಿ ಕಟ್ಟುಗಳು ಕಳಚಿ ಹೋಗುತ್ತವೆ ಎಂಬುದೊಂದೇ ಪರಿಹಾರ ಇರುತ್ತದೆ. ಧರ್ಮರಾಯನು ದುರ್ಯೋಧನನ ಪತ್ನಿ ಭಾನುಮತಿ ಈ ಕಾರ್ಯ ಮಾಡಲಿ ಎಂದರೆ ಅವಳು ಪತಿವ್ರತೆಯಾದ ತಾನು ಗಂಡನಿಗೆ ಕಾಲು ಸೋಕಿಸಲಾರೆ ಎಂದುಬಿಡುತ್ತಾಳೆ. ದ್ರೌಪದಿಯೇ ಆ ಕೆಲಸವನ್ನೂ ಮಾಡಬೇಕಾಗಿ ಬರುತ್ತದೆ. 'ಹನ್ನೊಂದಕ್ಷೋಹಿಣಿ ದರಬಾರಿನಲ್ಲಿ/ನನ್ನ ಸೀರೆಯ ಸೆಳಸಿದ ಪಾತಕಿಯ/ಕಣ್ಣಿಂದ ನೋಡಲಾರೆ'ನೆಂದು ಅವಳು ನಿರಾಕರಿಸಿದರೂ ಭೀಮನು,

**'ಕಣ್ಣಿಂದ ನೋಡಬೇಡ – ದ್ರೋಪತಿ**
**ಕೈಯಿಂದ ಮುಟ್ಟಬೇಡ – ನನ್ನ ಸತಿ**
**ಕಾಲಿಂದ ಒದ್ದು ಬಾರೆ – ಆ ಪಾಪಿಯ**
**ಕಾಲಿಂದ ಒದ್ದುಬಾರೆ"**

ಎಂದು ಮನವೊಲಿಸಿ ಭಾನುಮತಿಗೆ ತನ್ನ ಅಣ್ಣಕೊಟ್ಟಿದ್ದ ಅಭಯದ ನುಡಿಯನ್ನು ಸತ್ಯವಾಗಿಸುವಂತೆ ಅವಳನ್ನು ಒತ್ತಾಯಿಸುತ್ತಾನೆ.

ಹೀಗೆ 'ಜನಪದ ಮಹಾಭಾರತ'ದಲ್ಲಿ ದ್ರೌಪದಿ ದುರ್ಯೋಧನನನ್ನು ಕಾಲಿಂದ ಒದ್ದು ಅವನ ಕಟ್ಟುಗಳು ಕಳಚಿ ಪ್ರಾಣವುಳಿಯುವಂತೆ ಮಾಡಿದ ಮಹಾಸತಿ. ದುರ್ಯೋಧನ ಮಾತ್ರ ನಾಚುಗೆ, ಕೃತಜ್ಞತೆ ಯಾವುದನ್ನೂ ಅನುಭವಿಸದೆ, ಅವಳು ಸೊಕ್ಕಿನಿಂದ ತನ್ನನ್ನು ಒದ್ದಳೆಂದು ಪ್ರತೀಕಾರ ಬಯಸುವ ದ್ವೇಷ ಬೆಳೆಸಿಕೊಳ್ಳುತ್ತಾನೆ. ಸೈಂಧವರಾಜ ಜಯದ್ರಥನನ್ನು ಚಿತಾವಣೆ ಮಾಡಿ ಕಾಡಲ್ಲಿ ಆಶ್ರಮದಲ್ಲಿ ದ್ರೌಪದಿ ಒಬ್ಬಳೇ ಇರುವಾಗ ಅವಳನ್ನು ಅಪಹರಿಸುವಂತೆ ಮಾಡುತ್ತಾನೆ. ಆದರೆ ದ್ರೌಪದಿಯನ್ನು ಅವನು ಹೊತ್ತು ಒಯ್ಯುವಾಗ ಅವಳ ಮೊರೆ ಕೇಳಿ ಕೃಷ್ಣ ಪರಮಾತ್ಮ ಒಂದು ಹುಲ್ಲುಕಡ್ಡಿಯನ್ನು ಮಂತ್ರಿಸಿ ಪ್ರಯೋಗಿಸುತ್ತಾನೆ. ಅದು ಚಾಟಿಯಾಗಿ ಜಯದ್ರಥನನ್ನು ಬಡಿಯತೊಡಗಿ ಅವನು ಕಿರುಚಾಡಲಾರಂಭಿಸುತ್ತಾನೆ. ಭೀಮ ಅರ್ಜುನರು ಬಂದು ಅವನಿಂದ ದ್ರೌಪದಿಯನ್ನು ಬಿಡಿಸಿಕೊಂಡು ಅವನ ತಲೆಯಲ್ಲಿ ಮೂರುಪಟ್ಟೆ ಕೂದಲು ಬೋಳಿಸಿ, ಮುಖಕ್ಕೆ ಸುಣ್ಣಮಣ್ಣಿನ ಪಟ್ಟಿಗಳನ್ನು ಬಳಸಿ, ಕಾಯಿಸಿ ಬರೆಹಾಕಿ, ದ್ರೌಪದಿಯಿಂದಲೇ ಛಡಿಯೇಟು ಹೊಡೆಸಿ, ಹಸ್ತಿನಾಪುರಕ್ಕೆ ಓಡಿಸುತ್ತಾರೆ.

ಅಜ್ಞಾತವಾಸದ ಅವಧಿಯಲ್ಲಿ ಕೀಚಕನಿಂದ ಕಿರುಕುಳ ಅನುಭವಿಸಿದ ದ್ರೌಪದಿ ಭೀಮನಿಂದ ಅವನನ್ನು ಕೊಲ್ಲಿಸುವ ಪ್ರಸಂಗ ವ್ಯಾಸಮಹಾಭಾರತದಲ್ಲಿ ಇರುವುದಕ್ಕಿಂತ ವಿಸ್ತಾರವಾದ ಕಥೆಯಾಗಿ 'ಜನಪದ ಭಾರತ'ದಲ್ಲಿ ನಿರೂಪಿತವಾಗಿದೆ. ಯುದ್ಧಕ್ಕೆ ಮೊದಲು ಕೃಷ್ಣನು ದ್ರೌಪದಿಯನ್ನು ಭೀಷ್ಮರ ಬಳಿಗೆ ಹೋಗಿ 'ಓಲೆಭಾಗ್ಯ'ದ ವರವನ್ನು ಪಡೆದುಕೊಳ್ಳಲು ಪ್ರೇರಿಸಿ ಕಳುಹಿಸುತ್ತಾನೆ. ಇದರಿಂದ ಅವಳ ಪತಿಗಳು ಭೀಷ್ಮರಿಂದ ಹತರಾಗುವುದನ್ನು ಅವಳು ತಪ್ಪಿಸುತ್ತಾಳೆ. ಗದಾಯುದ್ಧದಲ್ಲಿ ಭೀಮನು ಹೋರಾಡಿ ದಣಿದು ಮೈಯೆಲ್ಲ ಗಾಯಗೊಂಡರೂ ವಜ್ರಕಾಯನಾಗಿದ್ದ ದುರ್ಯೋಧನನಿಗೆ ಕೂದಲೂ ಕೊಂಕಿರುವುದಿಲ್ಲ. ಆಗ ಕೃಷ್ಣನು ಸನ್ನೆಮಾಡಿ 'ತೊಡೆ ಸಂದ್ಗೆ ಹೊಡಿ' ಎಂದು ಸೂಚಿಸಲು, ಭೀಮನು ಅದೇ ರೀತಿ ಹೊಡೆದು ದುರ್ಯೋಧನನ ತೊಡೆ ಮುರಿದು ಉರುಳಿಸುತ್ತಾನೆ.

ದುರ್ಯೋಧನನ ಮೇಲೆ ಸೇಡು ತೀರಿದ ಸಂತೃಪ್ತಿಯಿಂದ **'ದ್ರೌಪದಿಯು ತನ್ನ ತವರು ಮನೆಯಿಂದ/ತನ್ನ ಜೊತೆಯಲಿ ಬಂದಿರೋ ತಿಂಗಳರನ್ನೆಲ್ಲ ಕರ್ದು/ನಾವು ಗಂಗಾನದಿಗೆ ಹೋಗಿ/ಕರಗಾವ ಪೂಜ್ಸಬೇಕು'** ಎಂದು ಹೇಳಿ ಪೂಜಾ ಸಾಮಾನುಗಳನ್ನು ತೆಗೆದುಕೊಂಡು ತಿಗಳರೊಂದಿಗೆ **'ವಾಲ್ಗಾವ ಮಾಡುಸ್ಕೊಂಡು/ಕರಗಳ ಪೂಜೆ ಮಾಡಿ' "ವಾಳ್ಸೈ ಶ್ರೀಕೃಷ್ಣ/ವಾಳ್ಸೈ ಪರಮಾತ್ಮ"** ಎಂದು ಕಾಕಾತಿ ಕುಣಿಯುತ್ತಾ ಬರುವುದನ್ನು ಅಶ್ವತ್ಥಾಮ ನೋಡುತ್ತಾನೆ. ಅವನು ಕೌರವನಿಗೆ ಆಪತ್ತಾಗಿರಬೇಕೆಂದು ಶಂಕಿಸಿದ್ದು ನಿಜವೇ ಆದದ್ದನ್ನು ಕಂಡು ಪ್ರತೀಕಾರ ಭಾವದಿಂದ ಪಾಂಡವರೆಲ್ಲರ ವಧೆಗೆ ಪ್ರತಿಜ್ಞೆ ಮಾಡುತ್ತಾನೆ. ಆದರೆ ಕೃಷ್ಣ ಈ ಸಂಗತಿಯನ್ನು ಊಹಿಸಿ ಪಾಂಡವರು ಆ ರಾತ್ರಿ ಮನೆಯಿಂದ ಹೊರಗುಳಿಯುವಂತೆ ಮಾಡಿರುತ್ತಾನೆ. ಪಾಂಡವರ ಮಕ್ಕಳು ಐವರನ್ನೇ ಪಾಂಡವರೆಂದು ಭ್ರಮಿಸಿ ಅಶ್ವತ್ಥಾಮ ಅವರ ತಲೆ ಕತ್ತರಿಸುತ್ತಾನೆ. ಹೀಗೆ ದುರ್ಯೋಧನನ ಮೇಲೆ ಸೇಡು ತೀರಿಸಿಕೊಂಡ ಸಂತೋಷ ದ್ರೌಪದಿಗೆ ಉಳಿಯದೆ ಪುತ್ರಶೋಕದಲ್ಲಿ ಪರಿಣಮಿಸುತ್ತದೆ.

ಮಹಾಪ್ರಾಸ್ಥಾನಿಕ ಪಯಣದಲ್ಲಿ ಎಲ್ಲರಿಗಿಂತ ಕಡೆಯವಳಾಗಿ ಹೋಗುವ ದ್ರೌಪದಿ ಸಾವಿನಲ್ಲಿ ಎಲ್ಲರಿಗಿಂತ ಮೊದಲಿನವಳಾಗುತ್ತಾಳೆ. ಈ ಪ್ರಸಂಗವನ್ನು 'ಜನಪದ ಮಹಾಭಾರತವು' 'ಸೀಲಾನದಿ ಪರ್ವ'ವೆಂದು ಕರೆದಿದೆ. ಈ ಸೀಲಾನದಿ ಸತ್ಯದ ಸಮುದ್ರ, ಅವರವರ ಸತ್ಯಧರ್ಮಗಳ ಮಹಿಮೆಯಲ್ಲಿ ಇದನ್ನು ದಾಟಿ ಮುಂದೆ ಹೋಗಬೇಕು ಎಂದು ಸ್ವರ್ಗಾರೋಹಣದ ಪಯಣದ ಹಾದಿಯಲ್ಲಿ ಧರ್ಮರಾಯ ವಿವರಿಸುತ್ತಾನೆ. ಮೊತ್ತಮೊದಲು ದ್ರೌಪದಿ ಆ ನದಿಗೆ ಕಾಲಿಟ್ಟು ಕೃಷ್ಣನನ್ನೂ ತನ್ನ ಧರ್ಮವನ್ನೂ ನಂಬಿ ದಾಟಲು ಯತ್ನಿಸುತ್ತಾಳೆ. ಅವಳ ಹಿಂದೆ ನಕುಲ, ಸಹದೇವ, ಅರ್ಜುನ, ಭೀಮ, ಎಲ್ಲರಿಗಿಂತ ಹಿಂದೆ ಧರ್ಮರಾಯ, ಅವನ ಹಿಂದೆ ನಾಯಿಮರಿ–ಹೀಗೆ ನದಿಯನ್ನು ದಾಟಲು ಹೊರಡುತ್ತಾರೆ. ಆದರೆ ಮೂರು ಯೋಜನ ದಾಟುವಷ್ಟರಲ್ಲಿ ದ್ರೌಪದಿ ಮುಂದೆ ನಡೆಯಲಾಗದೆ ಕುಸಿದು ಬೀಳುತ್ತಾಳೆ. ಐವರು ಗಂಡಂದಿರಿಗೂ ಪತ್ನಿಯಾಗಿದ್ದುಕೊಂಡು ಯಾರಿಗೂ ವಂಚನೆ ಮಾಡದ ಪತಿವ್ರತೆಯಾಗಿದ್ದರೂ ತನಗೇಕೆ ಈ ಸ್ಥಿತಿ ಎಂದು ಅವಳು ಕೇಳುತ್ತಾಳೆ. ಧರ್ಮರಾಯ ಹೇಳುತ್ತಾನೆ **"ಪತಿವ್ರತೆಯೂ ಸರಿ, ಯಾವ ತಪ್ಪೂ ಮಾಡಿಲ್ಲ ನಿಜ, ಆದರೆ ದ್ರೋಪತಾ ನಿನ್ನ ಹೆಚ್ಚಾದ ಪ್ರೀತಿ ಅರ್ಜುನನ ಮೇಲಿತ್ತು/ಮಿಕ್ಕುನಾದ ಪ್ರೀತಿ ಉಳಿದವುರೊಂದ್ಗಿತ್ತು/ಅದರಿಂದಾಗಿ ಹಿಂಗಾಯ್ತು"** ಹೀಗೆ 'ಪಾತಿವ್ರತ್ಯ'ದ ಚೌಕಟ್ಟಿನ ಒಳಗಿದ್ದೂ ದ್ರೌಪದಿ ಶೀಲಾನದಿಯ ಪರೀಕ್ಷೆಯಲ್ಲಿ ಉತ್ತೀರ್ಣಳಾಗದೇ ಮುಳುಗಿ ಮರೆಯಾದಳೆಂದು ಈ ಜನಪದ ಕಾವ್ಯ ಚಿತ್ರಿಸುತ್ತದೆ.

'ದ್ರೋಪತಿಯ ಹಾಡು' ಎಂಬ ಕಾವ್ಯದಲ್ಲಿಯೂ ದ್ರೌಪದಿ ದುರ್ಯೋಧನನನ್ನು ಪಗಡೆಯಾಡಿ ಸೋಲಿಸಿ, ಧರ್ಮರಾಯ ಸೋತಿದ್ದ ಎಲ್ಲ ಸಂಪತ್ತನ್ನೂ ಮತ್ತೆ ಗೆದ್ದುಕೊಂಡು, ದಾಸ್ಯದಿಂದ ಪತಿಗಳನ್ನು ಮುಕ್ತರನ್ನಾಗಿ ಮಾಡುತ್ತಾಳೆ. ಆದರೆ ಆಟ ಗೆದ್ದು, ಆಸ್ತಿ ಗೆದ್ದುಕೊಂಡು ಬಂದ ಅವಳಿಗೆ ಸತ್ವಪರೀಕ್ಷೆ ಇಲ್ಲೂ ತಪ್ಪುವುದಿಲ್ಲ.

**'ಆಟೆಲ್ಲ ಗೆದ್ದಿದಾಳ ಆಟೆಲ್ಲ ತಕ್ಕೊಂಡು**
**ತನ್ನ ಮಹಲಿಗೆ ಬಂದಿದಾಳೆ ಕೋಲೆ**
**ಶೆಟ್ಟಿ ಸಾವಕಾರನ ಮಗ ತಟ್ಟಿಯರ ತೆರೆಬರ್ರಿ**
**ತಟ್ಟಿ ತೆರೆಬರ್ರಿ ಅರಸರೆ ಕೋಲೆ**
**ಊರನೇ ಒಳಗೊಂಡು ಕರಿನಾಯಿ ಬಡಿದಾಂವ**
**ನಿನಗ್ಯಾಂಗ ಬಿಟ್ಟಾವೆ ಕಳದು ಕೋಲೆ**
**ದೂರೆ ನಿಂದಾರೆ ದುರಪತಿ ಕೋಲೆ'**

ಎಂದು ಹೇಳಿ ಅರಸರು

"ಊರಿನ ಹೊರಗೆ ಕುಂತಿರುವ ಕಲ್ಲುಬಸವನಿಗೆ
ನೀರುಕುಡಿಸಿ ಬಂದೆಯಾದರೆ ನೀನು
ಪತಿವರ ತಿದ್ದಂತ ತಿಳಿತಿನಿ" ಎನ್ನುತ್ತಾರೆ.

'ಜಟ್ಟಂತ ದುರಪತಿ ಚರಗಿ ತುಂಬ ನೀರ ಒಯ್ದು
ಉಳ್ಳಯ್ಯಾ ನೀರ ಮುಗಿಯೇಳು ಕೋಲೆ
ಜಟ್ಟಂತ ಎದ್ದು ಮುಗುದಾದ ಕೋಲೆ'

ಕಲ್ಲುಬಸವನಿಗೆ ನೀರುಕುಡಿಸಿ ಬಂದಾದ ಮೇಲೆ ಅರಸರದು ಇನ್ನೊಂದು ಷರತ್ತು ಎದುರಾಗುತ್ತದೆ.

'ಊರಾನೇ ಹೊರಗೊಂದು ಸುಣ್ಣದ ಭಟ್ಟಿ ಉರಿತಾದ
ಅದರಾಗಿನ ಹಳ್ಳ ಆಯಿದ ಬಾರ ಕೋಲೆ
ದಗದಗ ಆಗಿ ಉರಿವಂತ ಬೆಂಕಿಯದ
ಅದರೊಳಗ ಆಕಿ ಜಿಗಿದಾಳ ಕೋಲೆ
ಕೊನೆಸೆರಗಿ ಧಕ್ಕಿ ಹತ್ತಿಲ್ಲ ಕೋಲೆ
ಪತಿವಂತ ಇದ್ದೇ ದುರಪತಿ ಕೋಲೆ"

ಸುಣ್ಣದ ಭಟ್ಟಿಯ ಉರಿಯೊಳಗೆ ಜಿಗಿದು ಅದರೊಳಗಿನ ಸುಣ್ಣದ ಹರಳನ್ನು ಆಯ್ದು ತರುವ ಈ ಪರೀಕ್ಷೆಯಲ್ಲೂ ದ್ರೌಪದಿ ಗೆಲ್ಲುತ್ತಾಳೆ, ಅವಳ ಸೆರಗಿನ ತುದಿ ಕೂಡ ಧಕ್ಕೆಯಾಗದ ಹಾಗೆ ಹೊರಬರುತ್ತಾಳೆ "ಪತಿವ್ರತೆ ಹೌದು" ಎಂಬ ಪ್ರಶಸ್ತಿಯನ್ನೂ ಅರಸರು ಅವಳಿಗೆ (ಕವಿಗಳೂ) ನೀಡುತ್ತಾರೆ. ಅಗ್ನಿಕುವರಿ ಹೀಗೆ ಜನಪದ ಕಾವ್ಯಗಳಲ್ಲಿ ಅಗ್ನಿಪರೀಕ್ಷೆ ಎದುರಿಸಲು ಪತಿ-ಅರಸರು ಅವಕಾಶ ಕಲ್ಪಿಸುತ್ತಾರೆ.

'ದ್ರೌಪದಿ' ಎಂಬ ಹಾಡಿನಲ್ಲಿ ದ್ರೌಪದಿ ರಾಜ್ಯಕೋಶಗಳನ್ನೇನೋ ಗೆದ್ದು ತಂದು ಗಂಡಂದಿರಿಗೆ ಒಪ್ಪಿಸುತ್ತಾಳೆ. ಆದರೆ ಪಾಂಡವರೇನು ಮಾಡಿದರು ಎಂಬುದನ್ನು ಈ ಕಾವ್ಯ ಹೇಳುವುದಿಲ್ಲ. ಬಹುಶಃ ದ್ರೌಪದಿಯ ಗೆಲುವಿಗೆ ಒಂದು ಕೃತಜ್ಞತೆ ಕೂಡ ಹೇಳದೆ ರಾಜ್ಯವನ್ನು ಮತ್ತೆ ಆಳಿಕೊಂಡಿರುತ್ತಾರೋ ಏನೋ. ಏಕೆಂದರೆ ದ್ರೌಪದಿ ರಾಜ್ಯ ಗೆದ್ದುಕೊಂಡ ಭಾಗದ ಬಳಿಕ ಈ ಕಾವ್ಯ ಹೇಳುವುದು, ದುರ್ಯೋಧನನ ಕೊರಗನ್ನು, ತನ್ನ ಹೆಂಡತಿಯರು ಕುರೂಪಿಗಳೆಂದು ತಾಯಿಯ ಸಲಹೆಯಂತೆ ಬೇರೆಯವರ ಪತ್ನಿಯನ್ನು ತನ್ನಲ್ಲಿಗೆ ಬರುವಂತೆ ಉಪಾಯಮಾಡಿದರೂ ತಾನು ಅವಳಿಂದ ಸುಖವನ್ನು ಪಡೆಯಲಾಗಲಿಲ್ಲವೆಂದು ಅವಳನ್ನು ಗಂಧ ಕೊಡು, ವೀಳ್ಯಕೊಡು, ಮಂಚಕ್ಕೆ ಬಾ ಎಂದು ಮುಂತಾಗಿ ಕರೆಯತೊಡಗಿದರೆ ಈ ದ್ರೌಪದಿ ತನ್ನ ಗಂಡರು ಸತ್ತಿಲ್ಲ, ತಾನು ತಾಳಿ ಮೂಗುತಿ ತೆಗೆದಿಲ್ಲ, ಧರುಮರ ಎಂಜಲನ್ನು ನಿನಗೆ ಹಾಕಲೇ ನೀನು **'ನಮರಾಯರಿಗೆ/ಗಿಂಡಿ ಇಡಿವಂತ ತುರಕನಾಗಿದ್ದೆಲ್ಲೋ'** ಎಂದು ಹಂಗಿಸಿ ತಿರಸ್ಕರಿಸಿ ಹೊರಟುಹೋಗುತ್ತಾಳೆ. ಈ 'ದ್ರೌಪದಿ' ಎಂಬ ಹಾಡು ಪೂರ್ಣ ರೂಪದಲ್ಲಿ ಗ್ರಾಮೀಣ ಜನಜೀವನದಿಂದ ಹೊಮ್ಮಿದ್ದು, ಇಲ್ಲಿ ಪುರುಷಾಧಿಪತ್ಯವಿದ್ದರೂ ರಾಜತ್ವ, ಸಾಮ್ರಾಜ್ಯದಾಹ, ಯುದ್ಧಾದಿಗಳ ಪ್ರಸ್ತಾಪವಿಲ್ಲ. ಈ ಕಾವ್ಯ ಪಾಂಡವರ ಏಳಿಗೆಯನ್ನು ದ್ರೌಪದಿ ಸಾಧಿಸಿದ್ದನ್ನು ಮಾತ್ರ ಹೇಳುತ್ತದೆಯಲ್ಲದೆ, ಹೀಗೆ ಹಾಡುವುದೇ ಒಂದು ಪವಿತ್ರ ಪುಣ್ಯಕಾರ್ಯವೆನ್ನುವ ಭಕ್ತಿ ಶ್ರದ್ಧೆಗಳು ಹಾಡುಗಾರ್ತಿಯ ನುಡಿಗಳಲ್ಲಿ ವ್ಯಕ್ತವಾಗುತ್ತವೆ.

'ದ್ರೌಪದಿ'ಯನ್ನು ಜನಪದ ಕವಿಗಳು ಆದಿಶಕ್ತಿ ಎಂದು ಕಂಡರೂ ಪುರುಷರು ಹಾಡಿರುವ ಪಠ್ಯಗಳು ಪಿತೃಪ್ರಧಾನ, ಪುರುಷಾಧಿಪತ್ಯದ ಚೌಕಟ್ಟಿನೊಳಗೇ ಅವಳನ್ನು ಚಿತ್ರಿಸಿದರೆ ಮಹಿಳೆಯರು ಹಾಡಿರುವ ಹಾಡುಗಳು ಈ ಪುರುಷಾಧಿಪತ್ಯವನ್ನು ಗೌಣವಾಗಿಸಿ ಚಿತ್ರಿಸಿ ದ್ರೌಪದಿಯನ್ನೇ ಎತ್ತಿಹಿಡಿಯುತ್ತವೆಂಬುದು ಗಮನಾರ್ಹ. ●

# ಸಾಲ ತೀರಲೇಬೇಕು

ಬೀಜಕ್ಕೆ ಉಪಚಾರ
ಮಾಡುತ್ತ
ಭೂಮಿಯನ್ನು ಬಾಗಿಲಾಚೆ
ನಿಲ್ಲಿಸಿದರು
ತ್ರಿಕಾಲ ಸಂಧ್ಯಾ
ಜಪಿಸುತ್ತ
ಭೂಮಿ ಮೈಲಿಗೆ
ಎಂದರು
ಬೀಜಕ್ಕೆ ಸಮೃದ್ಧ
ಪೋಷಣೆ ನೀಡುತ್ತ
ಭೂಮಿಯನ್ನು ಒಣಗಿಸಿದರು.

ಇವಳಾದರೂ
ಎಂಥವಳು!
ಎಲ್ಲ ನೋಡುತ್ತ
ಸುಮ್ಮನುಳಿದಳು
ಈ 'ಕ್ಷಮಯಾಧರಿತ್ರಿ
ಪಟ್ಟವಾದರೂ ಎಂಥದ್ದು?

ಅಂತಃಪುರದ
ಕೊನೆಯಿಲ್ಲದ
ನರಳಾಟಗಳ
ನರಕ ಸದೃಶ
ಶೃಂಖಲೆಗಳ
ಪರಿಚಯವಿಲ್ಲದವಳೆ
ಇವಳು?

ಯಾವ ಮೌಢ್ಯವೋ
ದಾಸ್ಯವೋ
ಕಾಲಪುರುಷನ
ದಿಗ್ವಿಜಯವೋ....

ಈ ಭೂಮಿಯಿಂದು
ಹಾಗೆಲ್ಲ
ಬೀಜ ಬಿತ್ತಿಸಿಕೊಳ್ಳಲು
ತಯ್ಯಾರಿಲ್ಲ
ನೆತ್ತರಧಾರೆ ಮಾಂಸದ ಮುದ್ದೆ
ಎಲ್ಲ ಸಾಕಾಗಿದೆ
ಈಗಿವಳು ಬಯಸಿದರೆ
ಮಾತ್ರ
ಬೀಜೋಪಚಾರ
ಬೀಜ ಮುಹೂರ್ತ
ಬೀಜ ಮಿಲನ!

ವೆಲ್‌ಡನ್ ಭೂಮಿ
ತಿರುಗಿ ನೋಡಿದರೆ
ಮತ್ತೆ ಕಲ್ಲಾಗುತ್ತೀ
ಚಂಡಿ ಚಾಮುಂಡಿಯರ
ಅವತಾರವೆತ್ತು
ತಪ್ಪೇನಿಲ್ಲ;
ಸಾಲ-
ಚಕ್ರಬಡ್ಡಿ ಸಮೇತ
ತೀರಲೇಬೇಕು!

■ ವಿಜಯ ಶ್ರೀ ಹಾಲಡಿ

# ಹೆಣ್ಣು ಕಳೆದುಕೊಳ್ಳುತ್ತಿರುವ ಸ್ವಂತಿಕೆ

■ ಎನ್.ಎಸ್.ಶ್ರೀಧರ ಮೂರ್ತಿ



ಗ್ಯಾಟ್ ಒಪ್ಪಂದದಂತೆ ದೃಶ್ಯಮಾಧ್ಯಮ ಕೂಡ ಒಂದು ಸರಕು. ಅದನ್ನು ಅವರು ಹೇಗಾದರೂ ವಿಶ್ಲೇಷಿಸಿಕೊಳ್ಳಲಿ ನಾವು ಮಾತ್ರ ಇದನ್ನು ಕಲೆಯಾಗಿ ನೋಡುತ್ತೇವೆ ಎಂದು ತಿಳಿಯಬಹುದಾದಷ್ಟು ಸರಳ ಸಂಗತಿಯಲ್ಲ ಇದು. ದೃಶ್ಯ ಮಾಧ್ಯಮ ಸಮಾಜದ ಮೇಲೆ ಬೀರುವ ಪರಿಣಾಮದ ಬಗ್ಗೆ ಜಾಗತೀಕರಣ ತಲೆಕೆಡಿಸಿಕೊಳ್ಳುವುದಿಲ್ಲ. ಮಾನವ ಜೀವನವನ್ನೇ ಒಂದು ಸರಕಾಗಿಸುವ ಇಲ್ಲಿ ಎಲ್ಲೆಡೆಯೂ ಕಾಣುವುದು ಬಂಡವಾಳವೇ! ಚಲನಚಿತ್ರ ಒಂದು ಅಭಿವ್ಯಕ್ತಿ ಮಾಧ್ಯಮ, ಅದು ಸರಕಾಗುವುದು ಬೇಡ ಎಂಬ ಪ್ರತಿರೋಧ ಮೊದಲು ಯೂರೋಪಿಯನ್ ದೇಶಗಳಲ್ಲಿ ಕೇಳಿ ಬಂದಿತು. ಅದರೂ ಅದು ಸರಕಾಗುವುದು ನಿಲ್ಲಲಿಲ್ಲ. ಈಗ ಶೇ 80ರಷ್ಟು ಹಾಲಿವುಡ್ ಚಿತ್ರಗಳು ಯೂರೋಪಿಗೆ ಬರುತ್ತಿದ್ದರೆ ಶೇ 0.5ರಷ್ಟು ಯೂರೋಪಿಯನ್ ಚಿತ್ರಗಳು ಅಮೇರಿಕಾಕ್ಕೆ ಹೋಗುತ್ತಿವೆ. ಈ ವಿಚಿತ್ರ ಸಮೀಕರಣದಿಂದ ಜನರನ್ನು ತಲಪುವುದು ಎಂಬ ಹಾಲಿವುಡ್‌ನ ಹುಂಬ ಸೂತ್ರವೇ ಚಿತ್ರ ಜಗತ್ತಿನ ವ್ಯಾಖ್ಯಾನವೂ ಆಗಿದೆ. ಈಗ ಭಾರತದಲ್ಲೂ ಕೂಡ ಇದೇಪ್ರವೃತ್ತಿ ಕಾಣಿಸಿದೆ. ಪರಿಣಾಮ, ದೃಶ್ಯ ಮಾಧ್ಯಮಗಳಿಗೆ ಬೇಕಾಗಿರುವುದು ಹೆಣ್ಣಿನ ದೇಹ ಮಾತ್ರ. ಹೆಣ್ಣಿನ ಶೋಷಣೆ ಬಗೆಗೆ ಕಾರ್ಯಕ್ರಮ ಪ್ರಸಾರ ವಾಗುವಾಗಲೇ ಅಶ್ಲೀಲವೆನ್ನಿಸಬಲ್ಲ ಬ್ರಾ ಜಾಹಿರಾತು ಪ್ರಸಾರ ವಾಗುತ್ತದೆ. ಇದು ಒಂದು ರೀತಿಯಲ್ಲಿ ಹೆಣ್ಣಿನ ಸ್ವಂತಿಕೆಯನ್ನೇ ನಾಶ ಮಾಡುತ್ತಿದೆ.

ಹೆಣ್ಣು ಎನ್ನುವಾಗ ನಾವು ಒಂದು ಸರಳ ರೇಖಾತ್ಮಕವಾದ ಲಿಂಗಾಧರಿತ ಸಮೂಹವನ್ನು ಮಾತ್ರ ಗುರುತಿಸುತ್ತೇವೆ. ವರ್ಗ ಮತ್ತು ಜಾತಿಗಳು ಮೂಡಿಸಿದ ವ್ಯತ್ಯಾಸಗಳನ್ನು ಗಮನಿಸುವುದಿಲ್ಲ. ಹೆಣ್ಣು, ವ್ಯಕ್ತಿ ಕೂಡ ಆಗಿ ಸಮಾಜದಲ್ಲಿ ಸ್ಥಾನ ಪಡೆದಿರುತ್ತಾಳೆ ಎಂಬ ಸರಳ ಸತ್ಯ ಚಿಂತನೆಯು ನಗಣ್ಯವಾಗುತ್ತಿದೆ. ವಾಸ್ತವ ಏನೆಂದರೆ ಹೆಣ್ಣಿನ ಜಗತ್ತು ಅವಳು ವಾಸಿಸುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದಿಂದ ವೈವಿಧ್ಯವನ್ನು ಪಡೆದಿರುತ್ತದೆ. ಎಪ್ಪತ್ತರ ದಶಕದಲ್ಲಿ ಕನ್ನಡದಲ್ಲಿ ಮಾಸ ಮತ್ತು ವಾರ ಪತ್ರಿಕೆಗಳಲ್ಲಿ ಕ್ರಾಂತಿ ಎಂದು ಕರೆಯಬಲ್ಲ ಬದಲಾವಣೆ ಸಂಭವಿಸಿತು. ಅದಕ್ಕೆ ಕಾರಣವಾಗಿದ್ದು ಜನಪ್ರಿಯವಾಗಿದ್ದ ಧಾರಾವಾಹಿಗಳು. ಆ ಕಾಲದ ಇಂತಹ ಧಾರಾವಾಹಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಮಧ್ಯಮ ವರ್ಗದ ಮಹಿಳೆಯ ಮನೋಸ್ಥಿತಿ ಅರ್ಥವಾಗ ಬಹುದಾಗಿದೆ. ಅಂದಿನ ಪತ್ರಿಕೆಗಳ ಪ್ರಸಾರಸಂಖ್ಯೆಗೆ ಮಧ್ಯಮವರ್ಗದ ಮಹಿಳೆಯರೇ ಕಾರಣರಾಗಿದ್ದರು. ವಾತ್ರವಲ್ಲ ಈ ಕಾದಂಬರಿಗಳು ಚಲನಚಿತ್ರವಾದಾಗಲೂ ಈ ಮಹಿಳೆಯರು ಪ್ರೇಕ್ಷಕರಾಗುತ್ತಿದ್ದರು. ಚಲನಚಿತ್ರವಾಗಿ ಆಯ್ಕೆಯಾಗುವುದರ ಹಿಂದೆ ಕೂಡ ಇಂತಹ ನಿರೀಕ್ಷೆಗಳು ಕೆಲಸ ಮಾಡುತ್ತಿದ್ದವು. ಹೀಗಿದ್ದರೂ ಈ ಪ್ರಕ್ರಿಯೆಯಲ್ಲಿ ಮಹಿಳೆಯರ ನಿರೀಕ್ಷೆಗಳು ನಿರ್ಣಾಯಕ ಅಂಶವಾಗುತ್ತಿತ್ತು. ಅವರಮೇಲೆ ಆಯ್ಕೆಗಳನ್ನು ಹೇರಲಾಗುತ್ತಿರಲಿಲ್ಲ. ಈಗ ಮೆಗಾ ಸೀರಿಯಲ್‌ಗಳು ಆ ಸ್ಥಾನದಲ್ಲಿವೆ. ಆದರೆ ಇಲ್ಲಿ ಮಾತ್ರ ಮಹಿಳೆಯರ ನಿರೀಕ್ಷೆಗಳನ್ನು ಗಮನಿಸಲಾಗುತ್ತಿಲ್ಲ. ಅಲ್ಲಿ ಬರುತ್ತಿರುವ ವಸ್ತುಗಳನ್ನು

ಎಪ್ಪತ್ತು ಮತ್ತು ಎಂಬತ್ತರ ದಶಕದ ಧಾರಾವಾಹಿಗಳಿಗೆ ಹೋಲಿಸಿದರೆ ಈ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಮೇಲುವರ್ಗದ ಸ್ವಚ್ಛಂದ ಜೀವನವನ್ನು ಆದರ್ಶ ಎಂದು ತೋರಿಸಲಾಗುತ್ತಿರುವ ಈ ಧಾರಾವಾಹಿಗಳಲ್ಲಿ ಲೈಂಗಿಕ ಸ್ವೇಚ್ಛೆಗೆ ಮಹತ್ವವಿರುತ್ತದೆ. ಇದರ ಅರ್ಥ ಧಾರಾವಹಿಗಳು ಮೌಲ್ಯ ಪ್ರತಿಪಾದಿಸ ಬೇಕು ಎಂದಲ್ಲ. ಆದರೆ ಕಥೆಗಿಂತ ಗ್ರಾಹಕರನ್ನು ಸೃಷ್ಟಿ ಮಾಡುವ ಪ್ರಯತ್ನಕ್ಕೆ ಇಲ್ಲಿ ಒತ್ತು ಸಿಕ್ಕುತ್ತಿದೆ. ಈ ಅಂಶ ರಿಯಾಲಿಟಿ ಶೋಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಅಲ್ಲಿನ ಸ್ಪರ್ಧೆ ಹಾಡುವುದಿರಲಿ, ಕುಣಿಯುವದಿರಲಿ, ಇಲ್ಲಸೌಂದರ್ಯ ಪ್ರದರ್ಶನವೇ ಇರಲಿ ಮುಖ್ಯವಾಗುವುದು ಹೆಣ್ಣಿನ ದೇಹ; ಅವಳು ಧರಿಸುವ ಆಭರಣ,ವಸ್ತ್ರ ಕೊನೆಗೆ ಚಪ್ಪಲಿ! ಇದು ಹೋರಾಟಗಾರರನ್ನು ಕನಸುಗಾರರನ್ನಾಗಿ ಮಾಡುವ ಜಾಗತೀಕರಣದ ಹುನ್ನಾರ. ಕಂಪ್ಯೂಟರ್ ಆಧರಿತ ಉದ್ಯೋಗದಲ್ಲಿ ಹೆಣ್ಣುಮಕ್ಕಳನ್ನು ದೊಡ್ಡ ಪ್ರಮಾಣದಲ್ಲಿ ತೊಡಗಿಸುವ ಸಂಸ್ಥೆಗಳು ಅವರನ್ನು ತನ್ನ ಸ್ವರೂಪದಲ್ಲೇ ಕೊಳ್ಳುಬಾಕ ಸಂಸ್ಕೃತಿಯ ದಾಸರನ್ನಾಗಿಸುವ ಹುನ್ನಾರವನ್ನು ಹೊಂದಿವೆ.

ಎಂಬತ್ತರ ದಶಕದಲ್ಲಿ ಸ್ತ್ರೀಸ್ವಾತಂತ್ರದ ಬಗ್ಗೆ, ಸ್ತ್ರೀಸಂವೇದನೆ ಮತ್ತು ಸ್ತ್ರೀಸ್ವಾತಂತ್ರ್ಯದ ಬಗ್ಗೆ ಅಕಾಡಮಿಕ್ ಚರ್ಚೆಗಳು ಆರಂಭವಾದವು. ಎಲ್ಲವೂ ಒಂದು ನೆಲೆಗೆ ಬಂದಿತು ಎನ್ನುವಾಗಲೇ ಜಾಗತೀಕರಣ ಅದರ ದಿಕ್ಕುತಪ್ಪಿಸುವ ಕೆಲಸ ಮಾಡುತ್ತಿದೆ. ಎಲ್ಲಾ ಕ್ಷೇತ್ರದಲ್ಲಿ ಸಮಾನತೆ ಪಡೆದ ಹೆಣ್ಣು ಈಗ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುತ್ತಿದ್ದಾಳೆ. ಬಂಡಾಯದ ಬಗ್ಗೆ ಮಾತನಾಡುತ್ತಲೇ ಕ್ರಿಯೆಯಿಂದ ದೂರ ವಾಗಿಸುವುದು ಬಂಡವಾಳಶಾಹಿ ವ್ಯವಸ್ಥೆಯ ಹುನ್ನಾರ. ಇವತ್ತು ಸಮಾನತೆಯ ಬಗ್ಗೆ ಆಡುವ ಮಾತೆಲ್ಲ ಪುರುಷ ವ್ಯವಸ್ಥೆಯ ಆನಂದಕ್ಕೇ ಎನ್ನುವಂತಾಗಿದೆ. ಹೆಣ್ಣಿನ ಶೋಷಣೆಯ ಕರುಣಾಜನಕ ಕಥೆಗಳನ್ನು ಆನಂದಿಸಬಲ್ಲ ಸ್ಯಾಡಿಸ್ಟ್ ಮನಸ್ಸುಗಳೇ ಹೆಚ್ಚಾಗಿರುವ ಸಮಾಜದಲ್ಲಿ ಸ್ತ್ರೀವಾದಿ ಬರವಣಿಗೆ ಕೂಡ ಕ್ಯಾಬರೆನೃತ್ಯದ ಅಕಾಡಮಿಕ್ ಮಾದರಿ ಯಾಗುತ್ತಿದೆ. ಇದರ ರಾಜಕೀಯವನ್ನು ಗುರುತಿಸದಿದ್ದರೆ ಶ್ರಮಪೂರ್ವಕ ವಾಗಿ ರೂಪಿಸಿದ ಚಳವಳಿ ದುರಂತದಹಾದಿ ಹಿಡಿಯಬಲ್ಲದು. ಇದರ ಜೊತೆಗೆ ಕೋಮುವಾದಿ ಬಲಪಂಥೀಯ ಚಿಂತನಾಕ್ರಮ ಧಾರ್ಮಿಕತೆ ಯನ್ನು ತನ್ನ ಭಾವನಾತ್ಮಕ ಅಸ್ತ್ರವಾಗಿಸಿದೆ. ಅದು ಹೆಣ್ಣನ್ನು ದುರ್ಬಲ ವಾಗಿಸಬಲ್ಲ ಪ್ರಬಲ ಅಸ್ತ್ರವಾಗಿ ರೂಪಿತವಾಗುತ್ತಿದೆ. ಕಳೆದ ಎರಡುದಶಕ ಗಳಲ್ಲಿ ಸಂಕಷ್ಟಹರ ಗಣಪತಿವ್ರತ ಮತ್ತು ಸತ್ಯನಾರಾಯಣ ವ್ರತಗಳು ಗಳಿಸಿರುವ ಅಗಾಧ ಜನಪ್ರಿಯತೆ ಒಂದು ಸಹಜವಾದ ವಿದ್ಯಮಾನವಲ್ಲ. ಅದರ ಹಿಂದೆ ಧಾರ್ಮಿಕ ಕಾರಣಗಳಿಗಿಂತ ಬಳಕೆದಾರ ಸಂಸ್ಕೃತಿಯೇ ಕೆಲಸ ಮಾಡುತ್ತಿದೆ. ಈ ಎರಡೂ ವ್ರತಗಳ ಆಚರಣೆ ಕ್ರಮವನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಇದರ ಜೊತೆಗೆ ಟಿ.ವಿ. ಭವಿಷ್ಯಗಳು ಅಗಾಧ ಜನಪ್ರಿಯತೆ ಪಡೆಯುತ್ತಿವೆ. ಅದನ್ನು ಮೌಢ್ಯದಿಂದ ನಂಬುವವರಲ್ಲಿ ಎಲ್ಲಾ ವರ್ಗದ ಹೆಣ್ಣುಮಕ್ಕಳಿದ್ದಾರೆ. ಜಾಗತೀಕರಣ ಅವರನ್ನು ನಂಬುವಂತೆ ಮಾಡುತ್ತಿದೆ. ಸೀಮಿತ ನೆಲೆಯಲ್ಲಿ ನಡೆಯುತ್ತಿದ್ದ ಮದುವೆ, ಉಪನಯನ, ಹಬ್ಬಗಳು ಎಲ್ಲವೂ ಇವತ್ತು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿವೆ. ಸಾಲದು ಎಂಬಂತೆ ಹೊಸ ಹೊಸ ಆಚರಣೆಗಳು ಹುಟ್ಟಿ ಕೊಳ್ಳುತ್ತಿವೆ. ನಾವು ಪ್ರತಿಕ್ರಿಯಿಸಲೂ ಆಗದಷ್ಟು ವೇಗವಾಗಿ ಜಾಗತೀಕರಣ ಬಳಕೆದಾರ ಸಂಸ್ಕೃತಿಯನ್ನು ಹೇರುತ್ತಿದೆ.

ಜಾಗತೀಕರಣದ ಹೊಡೆತಕ್ಕೆ ತತ್ತರಿಸಿರುವುದು ನಿಜವಾಗಿ ಕೆಳವರ್ಗದ ಮಹಿಳೆಯರು. ಎಂಬತ್ತರ ದಶಕದ ಕೈಗಾರಿಕೀಕರಣದ ನಂತರ ಮಹಿಳೆಯರು ದೊಡ್ಡ ಪ್ರಮಾಣದಲ್ಲಿ ಉದ್ಯೋಗವನ್ನು ಪಡೆದಿದ್ದರು. ಅಲ್ಲಿ ಗಂಡು- ಹೆಣ್ಣು ಎಂಬ ತಾರತಮ್ಯ ಎಣಿಸದ ವೇತನ ಶ್ರೇಣಿ ಇತ್ತು. ಹೆರಿಗೆ ಸೌಲಭ್ಯ ಸೇರಿದಂತೆ ಹಲವು ನೆರವುಗಳು ಹೋರಾಟದ ಫಲವಾಗಿ ದಕ್ಕಿತ್ತು. ಇಲ್ಲಿನ ಕಾರ್ಮಿಕ ಸಂಘಗಳಿಗೆ ಸರ್ಕಾರದ ಮನ್ನಣೆ ಇತ್ತು. ಅದಕ್ಕಾಗಿಯೇ ಸಚಿವಾಲಯವಿತ್ತು. ಆದರೆ ಉದಾರೀಕರಣದ ಫಲವಾಗಿ ಬಂದಿರುವ ವಿದೇಶಿ ಕಂಪನಿಗಳಿಗೆ ಇದೆಲ್ಲಾ ಬೇಕಿಲ್ಲ. ಅವು ಬಂದಿರುವುದು ಸಾಮಾಜದ ಉದ್ಧಾರಕ್ಕಲ್ಲ, ಇಲ್ಲಿರುವ ಹುಲ್ಲುಗಾವಲನ್ನು ಮೇಯಲು. ಆದ್ದರಿಂದ ನೆಲದ ಕಾನೂನನ್ನು ಅವು ಗೌರವಿಸುವುದಿಲ್ಲ. ಕಾರ್ಮಿಕರಿಗೆ ಖಾಯಂ ನೌಕರಿ ಕೊಡದೆ ಜೀತಕ್ಕೆ ದೂಡುತ್ತವೆ. ಕಾರ್ಮಿಕ ಸಂಘಟನೆ ಒಡೆದು ಚೂರಾಗುತ್ತದೆ. ಶ್ರಮ ಆಧರಿತ ಉದ್ಯಮಗಳಲ್ಲಿ ಯಂತ್ರದ ಪ್ರವೇಶವಾಗಿದೆ. ಅದನ್ನು ಅವಲಂಬಿಸಿದ್ದ ನೂರಾರು ಮಹಿಳೆಯರು ಬೀದಿ ಪಾಲಾಗಿದ್ದಾರೆ. 1980ರಿಂದ ಈ ಮೂವತ್ತು ವರ್ಷಗಳಲ್ಲಿ ಜಗತ್ತಿನ ಪ್ರಮುಖ 5000 ಕಂಪನಿಗಳು 44 ಲಕ್ಷ ಉದ್ಯೋಗವನ್ನು ಕಡಿಮೆ ಮಾಡಿದವು. ಅದೇ ವೇಳೆ ತಮ್ಮ ಸಂಪತ್ತನ್ನು ಶೇ 2.3ರಷ್ಟು ಹೆಚ್ಚಿಸಿಕೊಂಡವು. ಈ ಕಂಪನಿಗಳು ಜಗತ್ತಿನಲ್ಲಿನ ವ್ಯಾಪಾರದ ಶೇ 20ರಷ್ಟನ್ನು ನಿರ್ವಹಿಸುತ್ತವೆ. ಇದರ ಅರ್ಥ ಇಷ್ಟೇ, ಜಾಗತೀಕರಣಕ್ಕೇ ಹೆಣ್ಣು ಪಾಲುದಾರಳಾಗಿ ಬೇಡ, ಬದಲಾಗಿ ಗ್ರಾಹಕಳಾಗಿ ಬೇಕು.

ಇತ್ತೀಚೆಗೆ ಬ್ಯಾಡ್ಮಿಂಟನ್ ಆಟವನ್ನು ಆಕರ್ಷಕವಾಗಿಸಲು ಆಟಗಾರ್ತಿಯರಿಗೆ ಕಡ್ಡಾಯವಾಗಿ ಸ್ಕರ್ಟ್ ಧರಿಸಲು ಹೇಳಲಾಗಿದೆ. ಇದು ಒಂದು ಉದಾಹರಣೆ ಮಾತ್ರ. ಇವತ್ತು ಎಲ್ಲಾ ಹಂತದಲ್ಲೂ ವರ್ಗ-ವರ್ಣದ ಭೇದ ದಾಟಿ ಹೆಣ್ಣು ರೂಪದರ್ಶಿಯಾಗುವುದು ವ್ಯವಸ್ಥೆಗೆ ಬೇಕಾಗಿದೆ. ಹೆಣ್ಣಿಗಾಗಿ ನಡೆಯುವ ಮಾರುಕಟ್ಟೆಯಲ್ಲಿ ಹೆಣ್ಣೇ ಸರಕು ಎಂಬುದು ವಿಪರ್ಯಾಸವಾದರೂ ಕಟುಸತ್ಯ. ●





# ಡಾ. ಕೆ. ಷರೀಫಾ ಅವರ ಕವಿತೆ : ಗುಡಿಯಾ

■ ಎಂ.ಡಿ. ಒಕ್ಕುಂದ

ಜನಪರ ಸಂಘಟನೆಗಳಲ್ಲಿ ಸಕ್ರಿಯ ಕಾರ್ಯಕರ್ತೆ ಯಾಗಿದ್ದ ಕೆ. ಷರೀಫಾ ಎಂಬತ್ತರ ದಶಕದಲ್ಲಿ ಕಾವ್ಯರಚನೆಯನ್ನಾರಂಭಿಸಿದರು. ಐದು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಕವಿತೆಗಳಲ್ಲಿ ಎಡಪಂಥೀಯ ಚಿಂತನೆಯ ಪ್ರಭಾವವಿದೆ. ನವ ಬಂಡವಾಳವಾದ ಶೋಷಿತ ಸಮುದಾಯಗಳಿಗೆ ಹೊಸ ಆತಂಕಗಳನ್ನು ಒಡ್ಡಿತು. ಮಹಿಳೆಯನ್ನು ಸರಕಾಗಿ ಪರಿವರ್ತಿಸಿತು. ಕೆಳವರ್ಗದ ಸಮುದಾಯಗಳಿಗೆ ಸೇರಿದ ಮಹಿಳೆಯ ಸ್ಥಿತಿ ಹೆಚ್ಚು ಸಂಕಷ್ಟದ್ದಾಗಿತ್ತು. ಬಂಡವಾಳವಾದಕ್ಕೆ ಪೂರಕವಾಗಿ ಬೆಳೆದ ಕೋಮುವಾದದ ಕಾರಣದಿಂದ ಅಲ್ಪಸಂಖ್ಯಾತರಲ್ಲಿ ಮತೀಯವಾದವು ಹೆಚ್ಚತೊಡಗಿತು. ಈ ದೌರ್ಜನ್ಯವು ದೊಡ್ಡ ಪ್ರಮಾಣದಲ್ಲಿ ತಟ್ಟಿದ್ದು ಮಹಿಳೆಯರಿಗೆ. ಇಂತಹ ಚಿಂತನೆ 'ಬುರ್ಖಾ ಪ್ಯಾರಡೈಸ್' ಸಂಕಲನದ 'ಗುಡಿಯಾ' ಎಂಬ ಕವಿತೆಯಲ್ಲಿದೆ. ಮುಸ್ಲಿಂ ಧರ್ಮದ ಶರೀಯತ್ ಮತ್ತು ಮೌಲ್ವಿಗಳ ಮತಾಂಧತೆಗೆ ತತ್ತರಿಸಿದ ಅಸಹಾಯಕ ಹೆಣ್ಣಿನ ಕಥನವಾಗಿದೆ. ಧರ್ಮದ ಕಕ್ಷೆಯೊಳಗಿನ ಹಿಂಸೆಯನ್ನು ನಿರೂಪಿಸುವ ಈ ಕವಿತೆ ಧಾರ್ಮಿಕ ಹಿಂಸೆಯ ಸ್ವರೂಪ ಮತ್ತು ಪರಿಣಾಮಗಳನ್ನು ಹೇಳುತ್ತದೆ.

**"ಗುಡಿಯಾ"**

ಗುಡಿಯಾ ಆಟದ ಗೊಂಬೆಯಲ್ಲ
ಬದುಕಿನ ಜೀವಂತ ಕವಿತೆ
ದುಃಖಕ್ಕೊಂದು ಹಕ್ಕು ಪಡೆದವಳು
ಶಬ್ದಗಳಾಚೆ ಹುರಿಗೊಂಡ ಸಂಕಟ
ಒಡಲು ನೋವಿನ ಕಡಲು
ಬಚ್ಚಿಟ್ಟುಕೊಂಡಳು ಕೆಂಡದುಂಡೆಗಳು
ದಾರಿ ಕಾದಳು ಗುಡಿಯಾ
ನಾಪತ್ತೆ ಪತಿಯು ಮರಳಿ ಬರುವದನು
ಕಂಗಳಲಿ ಆಸೆ ಹೊತ್ತು.
ಕನಸು ಹುಸಿಯಾಯ್ತು ರೆಪ್ಪೆ ಭಾರವಾಯ್ತು
ಹನಿಹನಿ ಉದುರಿಸಿದ ಕಣ್ಣಕಿಂಡಿ ಬರಿದಾಯ್ತು
ಪತಿಗೆ ವಿದಾಯ ಹೇಳಿ ಮನದ ಬಾಗಿಲಿಗೆ
ಚಿಲಕ ಜಡಿದು ಕದವಿಟ್ಟುಕೊಂಡಳು
ಮೌನ ಕಡಲಿಗೆ ಮರುಮಾತಿಲ್ಲದೆ ಶರಣಾದಳು
ಭಯಂಕರ ಅಲೆಗಳೆದುರು, ನಕ್ಕಿದ್ದೆಷ್ಟೋ,
ಬಿಕ್ಕಿದ್ದೆಷ್ಟೋ ವಿರಹ ಗೀತೆಗಳ
ಹಾಡಿದ್ದೆಷ್ಟೋ ಹಲುಬಿದ್ದೆಷ್ಟೋ
ಆದರೂ ಗುಡಿಯಾ ಆಟದ ಗೊಂಬೆಯಲ್ಲ.

ಹಿರಿಯರಾಣತಿಯೆದುರು ಮೂಕಳಾದಳು
ವಿಧಿಗೆ ತಲೆಬಾಗಿದಳು ಗುಡಿಯಾ
ಹೊತ್ತು ನಿಂತಳು ಇವನ ಫಲಭಾರ
ಹೊಸ ಆಸೆ ಮನದಲಿ ಚಿಗುರಿ
ಮೈಮನಗಳಲಿ ತೌಫೀಕನ ಬೆಳಕಿನ ಚುಳಕ
ವಿಧಿಯಾಟ ಕಂಡು ಬೆಚ್ಚಿಬಿದ್ದಳು ಗುಡಿಯಾ
ಆಗಲೇ ಮರಳಿ ಬಂದಿದ್ದ ಮೊದಲ ಪತಿ!
"ರಬ್ಬೇ ವಿಪತ್ತಿನಿಂದ ಪಾರು ಮಾಡು" ಎಂದು
ಹಗಲಿರುಳು ಹಲುಬಿದಳು ಗುಡಿಯಾ
ಸಂಕೀರ್ಣ ಬದುಕಿಗೆ ಎರವಾದಳು
ಆದರೂ ಗುಡಿಯಾ ಆಟದ ಗೊಂಬೆಯಲ್ಲ

* * *

ಮಿಸುಕುವ ಮಿಡಿಗೆ ಅಗಲಿಕೆ ಭಯವೇ
ಒದ್ದು ಎದೆ ಹಾಲು ಹೆಕ್ಕುವ ಮುನ್ನ
ಹೆತ್ತಮ್ಮನ ಗುರುತಿಸಿ ಕೇಕೆ ಹಾಕುವ ಮುನ್ನ
ಜಮಾತಿನ ತೀರ್ಮಾನ ಹೊರಬಿತ್ತು
ಕರುಳ ಬಳ್ಳಿಯನು ಕಿತ್ತು
ಮರಳಿ ಹೋಗಬೇಕು ಮೊದಲಿನವನಲ್ಲಿಗೆ
ತೀರ್ಮಾನ ಕೇಳಿದ ಮೀನಾರಿನ ಮೈಕು
"ಅಲ್ಲಾಹು" ಎಂದು ಕಿವಿ ಮುಚ್ಚಿಕೊಂಡಿತು
ಆದರೂ ಗುಡಿಯಾ ಆಟದಗೊಂಬೆಯಲ್ಲ.

ಭೂಮಿ ಎದೆ ಬಿರಿಯುವಂತೆ ರೋದಿಸಿದ
ಗುಡಿಯಾಳ ಆರ್ತ ಬಿಕ್ಕುಗಳ ಶಬ್ದ
ತಟ್ಟಲೇ ಇಲ್ಲ ಜಮಾತಿನ ಹೃದಯಕೆ
ಭೂಮಿ ಆಗಸಕೆ, ತಾಯಿ ಮಗುವಿಗೆ
ಹಾಕಬಹುದೇ ಪಂಚಾಯ್ತಿಗಳು ಬಹಿಷ್ಕಾರ?
ಕಂಪಿಸಿದ ಗುಬ್ಬಿ ಹೃದಯದಲಿ ಹಾಲಾಹಲ
ಕ್ರೌಂಚ ಪಕ್ಷಿಯ ಮೌನರೋದನ
ತಟ್ಟಲಾರದೇ ಜಮಾತಿನ ಕಟ್ಟೆಗೆ?

ಹೆಣ್ಣಿನ ಮಾತೃತ್ವ ಆಟದ ವಸ್ತುವೇನ?
ನಿಷೇಧದ ಬೇಲಿಗಳ ಕಿತ್ತೆಸೆದು
ಸೊಕ್ಕಿದ ಕೊಕ್ಕುಗಳ ತುಂಡರಿಸಿ
ಶಕ್ತಿ ಒಗ್ಗೂಡಿಸಿ ಎದ್ದುನಿಲ್ಲು ಬಾ ಗುಡಿಯಾ
ಬದುಕು ಮಾಧ್ಯಮದ ವಿಷಯವಲ್ಲ
ಚಪ್ಪರಿಸುವ ರಂಗುರಂಗಿನ ಸುದ್ದಿಯಲ್ಲ

ಎದ್ದು ಹೇಳುಬಾ ನಿನ್ನದೇ ನಿರ್ಧಾರ
ಕಿಕ್ಕಿರಿದ ಜಮಾತಿನ ಜನಗಳ ನಡುವೆ
ನಿನಗೆ ಸಿಕ್ಕಲಾರರೇ ಒಬ್ಬರಾದರೂ ಸಂತರು?
ನಿನ್ನ ನೋವ ಕರಗಿಸಿ, ಜೀವ ನೀಡಿ
ಸಂತೈಸುವ ಪೈಗಂಬರರು?
ಹೇಳುಬಾ ಗುಡಿಯಾ ನಿನ್ನದೇ ನಿರ್ಧಾರ.

*(ಬಿಜಾಪುರದ "ನವರಸಪುರ" ಉತ್ಸವಕ್ಕಾಗಿ)*

ಮಾನವೀಯತೆಯನ್ನೇ ತಮ್ಮ ಕವಿತೆಗಳ ಜೀವ ದ್ರವ್ಯವಾಗಿಸಿಕೊಂಡ ಷರೀಫಾರ ಕವಿತೆಗಳಲ್ಲಿ ಖಚಿತವಾದ ಎರಡು ವರ್ಗೀಕರಣವು ಕಾಣುತ್ತದೆ. ಮೊದಲನೆಯದಾಗಿ ಇವು ಅಲ್ಪಸಂಖ್ಯಾತ ಸಮುದಾಯದ ಹೆಣ್ಣು ಅನುಭವಿಸುವ ಧಾರ್ಮಿಕ ಹಿಂಸೆಯನ್ನು ಹೇಳುತ್ತವೆ. ಎರಡನೆಯದಾಗಿ ಸಮಕಾಲೀನ ಸಮಾಜವನ್ನು ಚಿತ್ರಹಿಂಸೆಗೆ ತಳ್ಳುತ್ತಿರುವ ಬಂಡವಾಳವಾದ, ಕೋಮುವಾದಗಳನ್ನು ವಿರೋಧಿಸುತ್ತದೆ. ಬಂಡಾಯ ಸಾಹಿತ್ಯದ ಸೈದ್ಧಾಂತಿಕ ನಿಲುವುಗಳಿವೆ. ಆ ಕಾರಣಕ್ಕಾಗಿಯೇ ಕಾವ್ಯದ ವಿಷಯಗಳಲ್ಲಿ ವಿಶಾಲವಾದ ಪರಿಪ್ರೇಕ್ಷ್ಯವಿದೆ. ಹಂಗರಹಳ್ಳಿಯ ಜೀತದಾಳಿನ ಗೋಳು, ಚೋಮನ ಬಡತನ, ದೇಶವನ್ನು ಅಡವಿಟ್ಟ ರಾಜಕಾರಣಿಗಳು, ಕೊಳ್ಳಿದೆವ್ವಗಳಂತೆ ಕುಣಿಯುತ್ತಿರುವ ಹಿಂದೂತ್ವವಾದಿಗಳು ಕಾವ್ಯದಲ್ಲಿ ಕಾಣುತ್ತಾರೆ. ಇವೆಲ್ಲವೂ ಉತ್ತಮ ಕವಿತೆಗಳೇ ಆಗಿವೆ ಎಂದಲ್ಲ, ಮಹಿಳಾ ಸಂವೇದನೆ ಪಡೆದುಕೊಂಡ ಗ್ರಹಿಕೆಯ ವಿಸ್ತಾರಕ್ಕಾಗಿ ಮುಖ್ಯವಾಗುತ್ತವೆ. 'ನನಗೆ ಮಾತನಾಡಲು ಬಿಡಿ' ಎಂಬ ಒತ್ತಾಯ ಮಾತಿನ ಅಧಿಕಾರವನ್ನೇ ಕಳೆದುಕೊಂಡಿದ್ದ ಮಹಿಳಾ ಸಮುದಾಯದ ಚಾರಿತ್ರಿಕ ಒತ್ತಡವನ್ನು ಸೂಚಿಸುತ್ತದೆ. ಇಲ್ಲಿಯ ಕವಿತೆಗಳು ಹೆಣ್ಣಿಗೆ ನಿಷೇಧಿತ ವಲಯವಾಗಿದ್ದ ಧಾರ್ಮಿಕ ಅಧಿಕಾರಕೇಂದ್ರವನ್ನು ಪ್ರಶ್ನಿಸುತ್ತವೆ, ಮರುಚಿಂತನೆಗೆ ಒತ್ತಾಯಿಸುತ್ತವೆ. ಧರ್ಮದ ರಾಜಕಾರಣವು ಕೋಮುವಾದ ಮತೀಯವಾದಗಳ ಹಿಂಸೆ-ದ್ವೇಷವನ್ನು ಹರಡಲು ಕಾರಣ ಅದು ಪುರುಷ ಚಿಂತನೆಗಳಿಂದ ಆವೃತ್ತವಾದದ್ದು. ಅಲ್ಲಿ ಹೆಣ್ಣಿನ ಸಂವೇದನೆಯ ಒಡಲಿನ ತಣಿವು ಅಗತ್ಯವಿದೆ ಎಂದು ಪ್ರತಿಪಾದಿಸುತ್ತದೆ.

### ಮತೀಯವಾದ ಮತ್ತು ಹೆಣ್ಣಿನ ಖಾಸಗಿ ಬದುಕು

'ಗುಡಿಯಾ' ಎಂಬ ಈ ಕವಿತೆ ಮುಸ್ಲಿಂ ಸಾಮಾನ್ಯ ಕುಟುಂಬದಲ್ಲಿ ಪುರುಷಾಧಿಪತ್ಯಕ್ಕೆ ಮತ್ತು ಧಾರ್ಮಿಕ ದುರುಳತನಕ್ಕೆ ಸಿಕ್ಕು ನಲುಗಿದ ಹೆಣ್ಣಿನ ಕಥೆಯಾಗಿದೆ. ಧರ್ಮ ಮತ್ತು ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳು ಎಲ್ಲ ಧರ್ಮಗಳಲ್ಲೂ ಹೆಣ್ಣಿನ ಖಾಸಗಿ ಬದುಕಿನ ಆಯ್ಕೆ-ಆದ್ಯತೆಗಳ ಮೇಲೆ ಸವಾರಿ ಮಾಡುತ್ತವೆ. ಆದರೆ "ಮುಸ್ಲಿಂ ಮಹಿಳೆಯರು ಶೋಷಿತರಲ್ಲೇ ಶೋಷಿತರಾಗಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಅವರು ಗರಿಷ್ಠ ಪ್ರಮಾಣದಲ್ಲಿ ಹತ್ತಿಕ್ಕಲ್ಪಟ್ಟಿದ್ದಾರೆ. ಅವರ ಪಾಲಿಗೆ 'ಮುಸ್ಲಿಂ ಪರ್ಸನಲ್ ಲಾ' ಬಹುದೊಡ್ಡ ಸಂಕೋಲೆಯಾಗಿದೆ. ಬಹುಪತ್ನಿತ್ವ, ಪರ್ದಾ, ತ್ರಿವಳಿ ತಲಾಕ್ ಮುಂತಾದ ಪಿಡುಗುಗಳಲ್ಲಿ ಸಿಕ್ಕು ಮುಸ್ಲಿಂಮಹಿಳೆಯರು ಜರ್ಝರಿತರಾಗಿದ್ದಾರೆ." ಎಂದು ಡಾ. ರೆಹಾನಾ ಸುಲ್ತಾನಾ ಅಭಿಪ್ರಾಯಪಡುತ್ತಾರೆ.

ಈ ಕವಿತೆಯ ಗುಡಿಯಾ 'ದುಃಖಕ್ಕೊಂದು ಹಕ್ಕು ಪಡೆದವಳು.' ಎಲ್ಲ ಸರಿ ಎನಿಸಿಕೊಂಡ ಕುಟುಂಬ ವ್ಯವಸ್ಥೆಯ ರಚನೆಯಲ್ಲಿಯೇ ಹೆಣ್ಣು ದುಃಖಿತಳು ಮತ್ತು ನೊಂದವಳು ಆಗಿರುತ್ತಾಳೆ. ಇನ್ನು ಆ ವ್ಯವಸ್ಥೆಯಲ್ಲಿ ಏರುಪೇರುಗಳು ಸಂಭವಿಸಿದರೆ? ಗುಡಿಯಾಳ ಪತಿಯ ಪಲಾಯನ, ಆ ಕಾರಣದ ಆತಂಕ, ಕಾಯುವಿಕೆ, ಅವಮಾನ, ನಿಂದೆ, ವಿರಹ ಈ ಎಲ್ಲವನ್ನೂ 'ಕ್ಷಮಯಾ ಧರಿತ್ರಿ'ಯಂತೆ ಸಹಿಸಿಕೊಂಡಳು. ಹಿರಿಯರು ಮರುಮದುವೆ ಮಾಡಿಸುತ್ತಾರೆ. ತಾಯಿಯಾಗುವ ಹೊತ್ತಲ್ಲಿ ಮರಳಿ ಬಂದ ಮೊದಲಪತಿ ಅವಳ ಜೀವನದಲ್ಲಿ ಬಿರುಗಾಳಿಯೆಬ್ಬಿಸುತ್ತಾನೆ. 'ಮರಳಿ ಹೋಗಬೇಕು ಮೊದಲಿನವನಲ್ಲಿಗೆ' ಎಂಬ ಜಮಾತಿನ ತೀರ್ಮಾನ ಹೊರಬರುತ್ತದೆ. ತಾಯಿ-ಮಗುವಿಗೆ ಬಹಿಷ್ಕಾರ ಹಾಕುವ ಪಂಚಾಯ್ತಿಯೆದುರು ಗುಡಿಯಾ ಮೌನ ರೋದನವಾಗುತ್ತಾಳೆ. ಹೀಗೆ ಹೆಣ್ಣನ್ನು ಆಯ್ಕೆಗಳೇ ಇಲ್ಲದವಳನ್ನಾಗಿ ಮಾಡಿ ಅವಳ ಖಾಸಗಿ ಬದುಕನ್ನು ಧರ್ಮದ ಮೂಲಭೂತವಾದವು ಚೂರು ಚೂರಾಗಿಸುತ್ತದೆ.

ಕವಿತೆಯು ಮಹಾಭಾರತದಲ್ಲಿ ಬರುವ ಯಯಾತಿ ಮಹಾರಾಜನ ಮಗಳು ಮಾಧವಿಯ ಕಥನವನ್ನು, 'ವಡ್ಡಾರಾಧನೆ'ಯಲ್ಲಿ ಬರುವ ಮೋದಾಳಿಯ ಕಥೆಯನ್ನು ನೆನಪಿಸುತ್ತದೆ. ಹೆಣ್ಣನ್ನು ತನ್ನ ಕೈಯ ದಾಳದಂತೆ ಧಾರ್ಮಿಕ ವ್ಯವಸ್ಥೆ ಬಳಸಿಕೊಂಡಿದೆ. ಇವು ಅಪವಾದ ರೀತಿಯ ಘಟನೆಗಳಲ್ಲ. ದಿನಬೆಳಗಾದರೆ ಈ ದೇಶದ ಮೂಲೆ ಮೂಲೆಗಳಲ್ಲಿ ಹೆಣ್ಣುಮಕ್ಕಳು ಮತೀಯ ಹಲ್ಲೆಗೆ ಒಳಗಾಗುತ್ತಾರೆ. ಯಾವ ಧರ್ಮದಲ್ಲಿಯೂ ಅವಳಿಗೆ ನ್ಯಾಯ ದೊರೆತಿಲ್ಲ. **'ಸ್ತ್ರೀಮತವನುತ್ತರಿಸಲಾಗದೆ ಧರ್ಮಶಾಸ್ತ್ರದೊಳು'** ಎಂಬ ಪ್ರಶ್ನೆ ಸುತ್ತುತ್ತಲೇ ಇದೆ. ಆಧುನಿಕ ಕನ್ನಡದ ಮುಸ್ಲಿಂ ಗದ್ಯ ಸಾಹಿತ್ಯವು ಧರ್ಮದ ಕಕ್ಷೆಯೊಳಗಿನ ಹೆಣ್ಣಿನ ಸ್ಥಿತಿಯನ್ನು ನಿರೂಪಿಸುತ್ತ ಬಂದಿದೆ. ಕೋಮುವಾದ ಕಠಿಣವಾಗುತ್ತಿರುವ ಕಾಲದಲ್ಲಿ, ಮತೀಯ ಹಿಂಸೆಗಳನ್ನು ದಾಖಲಿಸಲು ಸಾಧ್ಯವಾಗದ ಅಭಿವ್ಯಕ್ತಿಯ ತುರ್ತು ಪರಿಸ್ಥಿತಿಯಲ್ಲಿ ಮುಸ್ಲಿಂ ಸಾಹಿತ್ಯವಿದೆ. ಆದರೆ ಬಂಡಾಯ ಮನೋಧರ್ಮದ ಷರೀಫಾ ಈ ಒತ್ತಡವನ್ನು ಮೀರುತ್ತಾರೆ.

ಧರ್ಮದ ಹಿಡಿತವು ಹೆಣ್ಣಿನ ಖಾಸಗಿ ಬದುಕನ್ನು ನಿಯಂತ್ರಿಸುವ ವಿದ್ಯಮಾನವು ಇತ್ತೀಚಿನ ದಿನಗಳಲ್ಲಿ ತೀವ್ರವಾಗಿ ಬೆಳೆಯುತ್ತಿದೆ. ಇದಕ್ಕೆ ಡ್ರೆಸ್‌ಕೋಡ್ ಒಂದು ಉದಾಹರಣೆಯಾಗಿದೆ. ಸಭಾನಖ್ವಿ ಅವರ ಪ್ರಕಾರ- ಅಮೆರಿಕಾದ ವಿಶ್ವವಾಣಿಜ್ಯಕೇಂದ್ರದ ಮೇಲೆ ನಡೆದ ದಾಳಿಯ ಬಳಿಕ ಜಾರ್ಜ್‌ಬುಷ್ ನೇತೃತ್ವದಲ್ಲಿ ಮುಸ್ಲಿಮರ ಮೇಲೆ ನಡೆದಿರುವ ಭೀಕರ ಆಘಾತಕ್ಕೆ ಪ್ರತಿಕ್ರಿಯೆ ಎಂಬಂತೆ ವಿಶ್ವದ ಮುಸ್ಲಿಮರಲ್ಲಿ ಭಯ, ಆಂತಕ, ಆಕ್ರೋಶ ಮತ್ತು ಪ್ರತೀಕಾರದ ಭಾವನೆಗಳು ದಟ್ಟವಾಗುತ್ತ ಬಂದಿವೆ." ಮುಸ್ಲಿಂ ಐಡೆಂಟಿಟಿಯನ್ನು ಅಳಿಸಿ ಹಾಕುವುದು ಜಾರ್ಜ್‌ಬುಷ್‌ನ ಅವಿವೇಕವಾದರೆ; ಬಾಹ್ಯ ಚಹರೆಗಳ ಮೂಲಕ ಐಡೆಂಟಿಟಿಯನ್ನು ಉಳಿಸಿಕೊಳ್ಳುವ ಅವಿವೇಕವನ್ನು ಮುಸ್ಲಿಮರು ತೋರುತ್ತಿದ್ದಾರೆ. ಈ ಪ್ರಮೇಯವನ್ನು ಭಾರತಕ್ಕೂ ಅನ್ವಯಿಸಿಕೊಳ್ಳಬಹುದು. ಭಾರತದಲ್ಲಿ ಅಯೋಧ್ಯೆ ಗುಜರಾತ್ ಘಟನೆಗಳಗುಂಟ ಮತೀಯವಾದ ಪ್ರಬಲವಾಯಿತು. ಕಳೆದ 10-15 ವರ್ಷಗಳಿಂದ ಮಹಿಳೆಯರ ಬುರ್ಖಾಪದ್ಧತಿ ಹೆಚ್ಚಿದೆ. ಧಾರ್ಮಿಕವಾಗಿ ಛಿದ್ರವಾದ ಸಮಾಜದಲ್ಲಿ ಮಹಿಳೆ ಇಬ್ಬಾಯ ಖಡ್ಗದಂತಹ ಧಾರ್ಮಿಕ ನಿಲುವುಗಳಿಗೆ ಒಳಗಾಗಬೇಕಾಗುತ್ತದೆ. ಇತ್ತೀಚೆಗೆ ಮಂಗಳೂರಿನ ಕಾಲೇಜಿನಲ್ಲಿ ನಡೆದ ಘಟನೆಯನ್ನು ಗಮನಿಸಬೇಕು. ಬುರ್ಖಾ ನಿಷೇಧಿಸುವ ಹಿಂದೂತ್ವವಾದೀ ವಿದ್ಯಾರ್ಥಿ ಸಂಘಟನೆ, ಇನ್ನೊಂದೆಡೆ ಬುರ್ಖಾ ಕಡ್ಡಾಯಗೊಳಿಸುವ ಮತೀಯವಾದ - ಈ ದ್ವಂದ್ವವನ್ನು, ಇಂತಹ ದ್ವಂದ್ವಗಳನ್ನು ದಾಟಿ 'ಮುಸ್ಲಿಂ ಹುಡುಗಿಯರು ಶಾಲೆ ಕಲಿಯಬೇಕು.' ಇವು ಹೆಣ್ಣಿನ ಬದುಕನ್ನು ಮುರುಟಿಸುವ ದೀರ್ಘಕಾಲೀನ ಪರಿಣಾಮಗಳಾಗಿವೆ.

ಷರೀಫಾ ಅವರ 'ಬುರ್ಖಾ ಪ್ಯಾರಡೈಸ್' ಎಂಬ ಕವಿತೆ ಇಂತಹ ಕಾನೂನುಗಳನ್ನು ತರುವ ಮತೀಯವಾದಕ್ಕೂ, ಬಂಡವಾಳಶಾಹಿ ವ್ಯವಸ್ಥೆಗೂ ಪರಸ್ಪರ ಸಹಕಾರ ಇರುವುದನ್ನು ಹೇಳುತ್ತದೆ. ಇದು ಬಂಡವಾಳಶಾಹಿ ಕೋಮುವಾದಿ ಪುರುಷಪ್ರಧಾನ ವ್ಯವಸ್ಥೆಯ ಸಾಕ್ಷ್ಯಚಿತ್ರ. ಇಂತಹ ಪರಿಸ್ಥಿತಿಯಲ್ಲಿ 'ಗುಡಿಯಾ' ಆಟದ ಗೊಂಬೆಯಾಗುತ್ತಾಳೆ. ನವವಸಾಹತುವಾದದ ಈ ಕಾಲದಲ್ಲಿ ದೈವಕೇಂದ್ರಿತವಾಗಿ ಇಸ್ಲಾಮಿಕ್ ಜೀವನ ದೃಷ್ಟಿಯು ಮಸುಕಾಗಿ ಏಕದೈವ ಉಪಾಸನೆಯ ರೂಪವಾಗಷ್ಟೇ ಉಳಿದಿದೆ. ಇದರಿಂದಾಗಿ ಈ ಮುಂಚೆ ನೈತಿಕ ಒತ್ತಾಯಕ್ಕೆ ಪ್ರತಿನಿಧಿಯಂತಿದ್ದ ಧರ್ಮ ಇವತ್ತು ರಾಜಕೀಯ ರೂಪದ ಬಲಪ್ರಯೋಗದ ಖೆಡ್ಡಾ ಆಗಿ ಬದಲಾಗಿಬಿಟ್ಟಿದೆ.

### ಪರ್ಯಾಯದ ಚಿಂತನೆ

ಶೋಷಿತ ವರ್ತಮಾನವನ್ನು ದಾಖಲಿಸಲು ನಿಲ್ಲದೆ, ಕಾವ್ಯದ ಒಟ್ಟೂ ನಿರ್ವಚನದಲ್ಲಿ ಪರ್ಯಾಯದ ಚಿಂತನೆಯು ಸುಪ್ತವಾಗಿದೆ. 'ಗುಡಿಯಾ' ಎಂಬ ಈ ಕವಿತೆ ಜಮಾತಿನ ನ್ಯಾಯತೀರ್ಮಾನಕ್ಕೆ ಮಿಡುಕುವವಳನ್ನು ಕಾರಣಶೋಧದ ನೈತಿಕತೆಯಲ್ಲಿ ಪರ್ಯಾಯವನ್ನ ಹುಡುಕುತ್ತದೆ. 'ಮಾತೆ' ಎನ್ನುತ್ತ ಧರ್ಮಗಳ ಸಂವಿಧಾನವು ಮಾತೃತ್ವವನ್ನು ಅಪಮೌಲ್ಯಗೊಳಿಸುತ್ತದೆ ಅಥವಾ ಬಳಸಿಕೊಳ್ಳುತ್ತದೆ. ಧರ್ಮದ ನಿಷೇಧಗಳ ಬೇಲಿಯನ್ನು ಕಿತ್ತೆಸೆಯಲು ಸಿದ್ಧಳಾಗಬೇಕು. ಈ ಸಿದ್ಧತೆಗೆ ಯಾರ ಸಹಾಯವೂ ಇರುವುದಿಲ್ಲ.

ಯಾಕೆಂದರೆ ಹೆಣ್ಣಿನ ಸಮಸ್ಯೆ ಸರಳವಾದದ್ದಲ್ಲ. ಹೆಣ್ಣು ಪುರುಷಾಧಿಪತ್ಯ ದೊಳಗಿರುವು ದರಿಂದ ದೂರದ ಸಂಗತಿಗಳಿಗೆ ಸ್ಪಂದಿಸುವುದಾಗಲಿ, ಸಂಘಟನೆ–ಸಹಕಾರಗಳಾಗಲಿ ಸಾಧ್ಯವಿಲ್ಲ. ಈ ಅರಿವಿರುವ ಕವಿತೆ **'ಶಕ್ತಿ ಒಗ್ಗೂಡಿಸಿ ಎದ್ದುನಿಲ್ಲು ಬಾ ಗುಡಿಯಾ'** ಎಂದು ಸ್ವಸಾಮರ್ಥ್ಯವನ್ನು ಉದ್ದೀಪಿಸುತ್ತದೆ. ಎಂತಹ ಅನಾನುಕೂಲದಲ್ಲೂ ತನ್ನನ್ನು ತಾನು ಸಂಭಾಳಿಸಿಕೊಳ್ಳುವ ಸ್ಥೈರ್ಯ ತೋರಬೇಕಿದೆ. ಬಾಹ್ಯ ಸಹಕಾರದ ಮೂಲಕ ಸನ್ನದ್ಧಳಾಗುವ ಪ್ರಕ್ರಿಯೆ ಸಾಧ್ಯವಿಲ್ಲ. ಏಕಾಂಗಿ ನಿಲ್ಲುವ ಛಲ ತೋರಿದಾಗ **'ನೋವ ಕರಗಿಸಿ ಜೀವನೀಡಿ ಸಂತೈಸುವ ಪೈಗಂಬರರು'** ಸಿಗಬಹುದಾಗಿದೆ. ಹೀಗೆ ಹೆಣ್ಣಿನ ದಮನಿತ ಬದುಕಿಗೆ ಸ್ವ ಸಾಮರ್ಥ್ಯವೇ ಪರ್ಯಾಯ.

ಈ ಕವಿತೆ ತೀರಾ ಸಾಂಪ್ರದಾಯಿಕ ನಿಲುವನ್ನು ಪ್ರಕಟಿಸುತ್ತಿದ್ದಂತೆ ತೋರುತ್ತದೆ. ಆದರಿದು ಮುಸ್ಲಿಂ ಸಮುದಾಯದಲ್ಲಿ ತಿಳಿವಳಿಕೆಯ ಅಭಾವದಿಂದಾಗಿ ಅಥವಾ ತಪ್ಪು ತಿಳಿವಳಿಕೆಯಿಂದಾಗಿ ಅಸಹಾಯಕರೂ ಅವಲಂಬಿತರೂ ಆಗಿರುವ ಮುಸ್ಲಿಂ ಮಹಿಳೆಯರು ತಮ್ಮ ವಿಧೇಯತೆಯ ಮೇಲ್‌ಗವಸನ್ನು ಕಳೆದಿಡದಿದ್ದರೆ ಬದಲಾವಣೆ ಸಾಧ್ಯವಿಲ್ಲ ಎಂಬ ತಾತ್ತ್ವಿಕತೆಯನ್ನು ಹೇಳುತ್ತದೆ. ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಹಕ್ಕನ್ನು ಅವರು ಪಡೆದುಕೊಳ್ಳಬೇಕಿದೆ. ಹಕ್ಕೊತ್ತಾಯವು ಪ್ರತಿಭಟನೆಯೋ ಪ್ರತೀಕಾರವೋ ಆಗಿ ಕೇಳುವುದು ಅವಳ ತಪ್ಪಿನಿಂದಲ್ಲ. ಇಂತಹ ಪ್ರಯತ್ನಗಳು ನಡೆದಿಲ್ಲ ಎಂದಾಗಲೀ ನಡೆದಾಗ ಮತೀಯ ಶಕ್ತಿಗಳು ಸರಳವಾಗಿ ಸ್ವೀಕರಿಸಿವೆ ಎಂದಾಗಲೀ ಇದರ ಅರ್ಥವಲ್ಲ. ಶಬಾನಾ ಆಜ್ಮೀ **'ಪರದಾ ಅಥವಾ ಬುರ್ಖಾ ಧರಿಸಲೇಬೇಕೆಂದು ಕುರಾನ್‌ನಲ್ಲಿ ಎಲ್ಲಿಯೂ ಹೇಳಿಲ್ಲ'** ಎಂದಾಗ ದೆಹಲಿಯ ಶಾಹಿ ಇಮಾಮರಂಥ ಧಾರ್ಮಿಕ ಮುಖಂಡರು 'ನಾಚನೆ ಗಾನೆವಾಲಿ' ಎಂದು ಲೇವಡಿ ಮಾಡಿದರು. ಹೆಣ್ಣನ್ನು ಅಪಮಾನಿಸದಿರಲು ಕುರಾನ್ ಹೇಳುವುದಿಲ್ಲವೇ? ಕವಿತೆಯು 'ಕಿಕ್ಕಿರಿದ ಜಮಾತಿನ ನಡುವೆ' ಎಂದು ಸೂಚಿಸುವುದು ಇಂತಹ ಮತೀಯವಾದಿ ಮನಸ್ಸುಗಳನ್ನೇ. ಇವುಗಳ ನಡುವೆಯೇ 'ಸಂತೈಸುವ ಪೈಗಂಬರರು' ಇರಬಹುದು ಎನ್ನುವುದು ಈ ಕವಿತೆಯ ಪ್ರತಿಪಾದನೆ.

ಇಂದು ಮುಸ್ಲಿಂ ಮಹಿಳೆ ಭಾರತದಲ್ಲಿ ಇಂತಹದೊಂದು ಸಂಕಟದ ಚರಿತ್ರೆಗೆ ಮುಖಾಮುಖಿ ಯಾಗುತ್ತಿದ್ದಾಳೆ. ಖುರಾನಿಗೆ ಸರಿಯಾದ ಅರ್ಥವಿವರಣೆಯಾಗಿ, ಸಂವಿಧಾನದತ್ತವಾದ ಶಿಕ್ಷಣ, ಆಸ್ತಿಯ ಹಕ್ಕಿಗಾಗಿ, ಮನಬಂದಂತೆ ನ್ಯಾಯತೀರ್ಮಾನ ನೀಡುವ ಮುಲ್ಲಾಗಳಿಗೆ ಕಡಿವಾಣ ಹಾಕಲಿಕ್ಕಾಗಿ ಚಲನಶೀಲಳಾಗುತ್ತಿದ್ದಾಳೆ. ಅಂತಹದೊಂದು ತೆಳುವಾದ ಆದರೆ ಗಟ್ಟಿಯಾದ ಪರಂಪರೆ ಮುಸ್ಲಿಂ ಮಹಿಳಾ ಚಳವಳಿಗಿದೆ. ಇರಾನಿನಲ್ಲಿ ಖೊಮೇನಿಯು ಬುರ್ಖಾ ಕಡ್ಡಾಯಗೊಳಿಸಿದಾಗ ತೆಹರಾನಿನ ಬೀದಿಗಳಲ್ಲಿ ಐವತ್ತು ಸಾವಿರ ಮಹಿಳೆಯರು ಕರಾಳ ಶಾಸನದ ವಿರುದ್ಧ ಧ್ವನಿಯೆತ್ತಿ ಅದನ್ನು ಹಿಂತೆಗೆದುಕೊಳ್ಳುವಂತೆ ಮಾಡಿದ್ದರು. ಹಾಗಾಗಿ ಕವಿತೆಯ ಆಶಯ ಹುಸಿಯಾದದ್ದಲ್ಲ, ಸಿನಿಕತನದ್ದೂ ಅಲ್ಲ. ವಿಸ್ಮೃತಿಯನ್ನು ತೊಲಗಿಸುವಂಥದ್ದು. ಅವಳ ಈ ಭಾಗೀದಾರತ್ವ ಇಸ್ಲಾಂ ಧರ್ಮದ ಮೇಲಿನ ಜಡತ್ವದ ಅಪವಾದವನ್ನು ತೊಲಗಿಸುವುದೂ ಆಗಿರುತ್ತದೆ. ಕೋಮುವಾದವು ಇಸ್ಲಾಮನ್ನು ಅವಹೇಳನ ಮಾಡಲು, ಜನಮಾನಸದಲ್ಲಿ ಅದೊಂದು ಜಡಧರ್ಮ ಎಂದು ಬಿಂಬಿಸಲು ಅದು ಮಹಿಳೆಯರನ್ನು ನೋಡಿಕೊಳ್ಳುವ ರೀತಿಯನ್ನು ತೋರುತ್ತದೆ. ಇಸ್ಲಾಮಿನ ಮೂಲಭೂತ ತತ್ವಗಳು ಮತ್ತು ಅದು ತನ್ನ ಸಮಾಜದ ಧ್ಯೇಯೋದ್ದೇಶಗಳನ್ನು ರೂಪಿಸುವ ಕ್ರಮವನ್ನು ನೋಡಿದರೆ ಅದು ಮೂಲತಃ ಚಲನಶೀಲ ಹೊಂದಾಣಿಕೆಯ ಧರ್ಮ ವೆಂಬುದು ಗೊತ್ತಾಗುತ್ತದೆ. ಇಂತಹ ಹಾದಿಯಲ್ಲಿ 'ಸಂತೈಸುವ ಪೈಗಂಬರರು' ಸಿಗುವ ಆಶಯವನ್ನು ಕವಿತೆ ವ್ಯಕ್ತಪಡಿಸುತ್ತದೆ.

**ಅಭಿವ್ಯಕ್ತಿ ವಿಧಾನ**

ಕಾವ್ಯಕ್ಕೂ ಸಮಾಜಕ್ಕೂ ಇರುವ ಸಂಬಂಧವನ್ನು ನೇರವಾಗಿ ಹುಡುಕುವುದು ಎಂದರೆ ಕೃತಿಯನ್ನು ಸಾಮಾಜಿಕ ಸಂಗತಿಗಳನ್ನು ತಿಳಿಸುವ ಮಾಧ್ಯಮ ಮಾತ್ರ ಎಂದು ಅಪಮೌಲ್ಯಕ್ಕೆ ಒಳಗುಮಾಡಿದಂತಾಗುತ್ತದೆ. ತನ್ನ ಕಾಲದ ಸಾಮಾಜಿಕ ವಿದ್ಯಮಾನಗಳನ್ನು ಸುಮ್ಮನೆ ದಾಖಲಿಸುವುದು ಯಾವುದೇ ಉತ್ತಮ ಕಾವ್ಯದ ಉದ್ದೇಶವಲ್ಲ. ಆದರದು, ನೀರು ನೆಲಗಳೂ ಹೂವಿನ ರೂಪ–ರಸ–ಗಂಧವನ್ನು ನಿರ್ಧರಿಸುವಂತೆ ತನ್ನ ದೇಶ–ಕಾಲಗಳಿಗೆ ಬಂಧಿಯಾಗಿರುತ್ತದೆ. ಕಾವ್ಯದೊಳಗೆ ಈ ಸಂಗತಿಗಳು ಬೆರೆತು ಬರಬೇಕು. ಮಾನವೀಯತೆಯ ಪರವಾಗಿರುವ ಯಾವುದೇ ಕಾವ್ಯಕ್ಕೆ ನೋವುಗಳ ವಶವರ್ತಿಯಾಗಿಬಿಡುವ, ಗಾಯಗಳನ್ನು ನೆಕ್ಕುತ್ತ ತಲ್ಲೀನವಾಗಿ ಬಿಡುವ ಅಪಾಯವಿರುತ್ತದೆ. ಷರೀಫಾ ಅವರ ಹಲವಾರು ಕವಿತೆಗಳಲ್ಲಿ ಈ ಅಪಾಯದ ಹೊಳಹುಗಳಿವೆ. ಆದರೆ ಪ್ರಸ್ತುತ ಕವಿತೆ ತನ್ನ ಶೈಲಿ, ಧ್ವನಿ ಮತ್ತು ನಿರೂಪಣಾ ವಿಧಾನದ ಮೂಲಕ ಈ ಅಪಾಯಗಳನ್ನು ಮೀರುತ್ತದೆ.

ಕಥನ ಕವಿತೆಯ ಧಾಟಿಯಲ್ಲಿನ ಈ ಕವಿತೆಯು ಘಟನೆಯ ವಿವರಣೆಯಾಗದೆ ಭಾವದ ಸಂವೇದನೆಯಾಗುತ್ತದೆ. ಭಾವದ ಅಭಿವ್ಯಕ್ತಿಯು ಹಲವು ಕಡೆ ಸಾಂಪ್ರದಾಯಿಕ ರಚನೆಗಳಲ್ಲಿಯೇ ವಿರಮಿಸಿದೆ. ಆದರೆ ದೀರ್ಘ ಉದ್ಗಾರಗಳಲ್ಲಿ ಭಾವದ ಏರಿಳಿವುಗಳು ವಿಷಾದ ಸ್ಥಾಯಿಯಲ್ಲಿ ಚಲಿಸುತ್ತವೆ. ಕವಿತೆಯ ಶಕ್ತಿಯಿರುವುದು 'ಗುಡಿಯಾ ಆಟದ ಗೊಂಬೆಯಲ್ಲ' ಎಂದು ಪುನರುಕ್ತವಾಗುವ ಸಾಲುಗಳಲ್ಲಿ. 'ಆಟದ ಗೊಂಬೆ' ಎಂಬ ರೂಪಕ 'ಹಾಸ್ಯುಂಡು ಬೀಸಿ ಒಗೆದ ಬಾಳೆಲೆ'ಯಂತೆ ಘಾಸಿಗೊಳಿಸುತ್ತದೆ. ಪಿತೃವ್ಯವಸ್ಥೆ ಮತ್ತು ಧರ್ಮ ಹೆಣ್ಣನ್ನು ಹೀಗೆ ಬಳಸುತ್ತ ಬಂದಿವೆ. ಆದರೆ ಇನ್ನು ಅದಾಗದು ಅಥವಾ ಆಗಬಾರದು–ಎಂಬ ಒತ್ತಾಯವನ್ನು ಪುನರುಕ್ತಿಯು ಸೂಚಿಸುತ್ತದೆ.

**ತೀರ್ಮಾನ ಕೇಳಿದ ಮಿನಾರಿನ ಮೈಕು**
**'ಅಲ್ಲಾಹು' ಎಂದು ಕಿವಿಮುಚ್ಚಿಕೊಂಡಿತು**
**ಆದರೂ ಗುಡಿಯಾ ಆಟದ ಗೊಂಬೆಯಲ್ಲ**

'ಆದರೂ' ಎಂಬ ಪದ ಅವಳ ಜೀವನದ ಮೀಮಾಂಸೆಯನ್ನು ರೂಪಿಸುತ್ತದೆ. ಜೀವನದ ಗ್ರಹಿಕೆಯ ಕಾರಣದಿಂದ ಜೀವಶಕ್ತಿ ಪಡೆಯುವ ಕಾವ್ಯ ತನ್ನ ನಿರೂಪಣಾ ಕ್ರಮದಲ್ಲಿಯೇ ಜೀವನದ ವಿಶ್ಲೇಷಣೆಯನ್ನು ನಡೆಯಿಸುತ್ತದೆ. ಕವಿತೆಯ ಉದ್ಗಾರ, ಮೌನ, ಬಾಗು ಬಳಕುಗಳು ಓದುಗನಿಗೆ ಕೈಸನ್ನೆ ಮಾಡುತ್ತಿರುತ್ತವೆ. ಕವಿ ಕಾವ್ಯದ ವಸ್ತುವಿನೊಂದಿಗೆ ನಡೆಸುವ ತಾದಾತ್ಮ್ಯದಲ್ಲಿ ಭಾಷೆಯ ಈ ಸಂಯೋಜನೆ ಫಲಿಸುತ್ತದೆ. ಮತೀಯ ವಾದಿಗಳು ಧರ್ಮದ ಸತ್ವವನ್ನು ಹಾಳುಮಾಡುತ್ತಿರುವುದನ್ನು ಕವಿತೆ ತೋರುತ್ತದೆ. 'ಪ್ರಭುವೆ ನೀನೊಮ್ಮೆ ಹೆಣ್ಣಾಗು' ಎಂಬ ಇನ್ನೊಂದು ಕವಿತೆ ಕೂಡ ಹೆಣ್ಣಿನ ಬದುಕು ಯಾತನಾಶಿಬಿರವಾಗಿರುವುದನ್ನು ಸೂಚಿಸುತ್ತದೆ. **'ಧರ್ಮದ ಕಾಣದ ಕೈಗಳು ಬಂದೂಕು ಗುರಿಯಿಟ್ಟಿವೆ ನನ್ನತ್ತಲೇ'** ಎಂದು ದಿಗಿಲುಗೊಳ್ಳುತ್ತದೆ. 'ನೀನೂ ಎನ್ನಂತೆ ಒಡಲುಗೊಂಡು ನೋಡಾ' ಎಂಬ ಜೇಡರದಾಸಿಮಯ್ಯನ ವಚನ ನೆನಪಾಗುತ್ತದೆ. ಊಹೆ, ಕಲ್ಪನೆ, ಪುಕಾರುಗಳು ಕೂಡ ಹೆಣ್ಣಿಗೆ ಸಾವು ಬದುಕಿನ ಪ್ರಶ್ನೆಗಳಾಗಿಬಿಡುತ್ತವೆ.

ಬದುಕನ್ನು ಕುರಿತ ಹೆಣ್ಣಿನ ಸ್ವಂತ ನಿರ್ಧಾರಗಳು ಮರ್ಯಾದಾ ಹತ್ಯೆಗಳಿಗೆ ಕಾರಣವಾಗುತ್ತವೆ. ಹೀಗೆ ಹೆಣ್ಣಿನ ಬದುಕು ಧರ್ಮ, ಸಂಪ್ರದಾಯಗಳ ಹೆಸರಿನಲ್ಲಿ ಕೋಮುವಾದದ ವಸ್ತುವಾಗಿದೆ. ಕೋಮು ಗಲಭೆಗಳು ಹೆಣ್ಣಿನ ಮೇಲೆ ಕ್ರೂರ ಆಕ್ರಮಣಗಳನ್ನು ಮಾಡುತ್ತವೆ. ಆದರೆ ಕೋಮುಸಿದ್ಧಾಂತಗಳು ಅನುದಿನದ ಬದುಕಿನಲ್ಲಿ ಹೆಣ್ಣನ್ನು ಅಪರಾಧಿಯ ಪರಾಧೀನತೆಯಲ್ಲಿಡುತ್ತವೆ. ಬಂಡವಾಳಶಾಹಿಯು ಹೆಣ್ಣಿನ ಖಾಸಗಿ ಬದುಕನ್ನು ಹರಾಜಿಗಿಟ್ಟಿದೆ. ಆ ಮೂಲಕ ಮತ್ತೆ ಗೃಹಬಂಧನದಲ್ಲಿಡುವ ಸಿದ್ಧತೆಯನ್ನು ಮಾಡುತ್ತದೆ. ಹೀಗೆ ಬಂಡವಾಳವಾದ ಕೋಮುವಾದಗಳು ಮತೀಯ ಪ್ರಜ್ಞೆಯನ್ನು ಬಲಪಡಿಸುತ್ತವೆ. ಅದರ ನೇರ ದಬ್ಬಾಳಿಕೆ ಮತ್ತು ಹೊಣೆಗಾರಿಕೆ ಯನ್ನು ಹೆಣ್ಣು ನಿರ್ವಹಿಸಬೇಕಾಗುತ್ತದೆ. ಇದು ಪ್ರಸ್ತುತ ಕವಿತೆಯ ಒಟ್ಟಾರೆ ನಿಲುವು. ●



# 'ಹೊತ್ತು ಕಂತುವ ಮುನ್ನ' ಕುರಿತು....

■ಡಾ. ಸಬಿಹಾ ಭೂಮೀಗೌಡ

ಚಂದ್ರಗಿರಿಯ ತೀರದಲ್ಲಿ ಕಾದಂಬರಿಯ ಮೂಲಕ ಕನ್ನಡದ ಓದುಗರಿಗೆ ಪರಿಚಿತರಾದ ಸಾರಾ ಅಬೂಬಕ್ಕರ್, ಇಂದು ಸಾಹಿತ್ಯಕ್ಷೇತ್ರದಲ್ಲಿ ಏರಿರುವ ಎತ್ತರ ಹಿರಿದಾದುದು. ಇದಕ್ಕೆ ಅವರು ಅನಂತರ ಬರೆದ ಕಾದಂಬರಿಗಳು, ಕಥಾಸಂಕಲನಗಳು, ವೈಚಾರಿಕ ಲೇಖನಗಳು, ಅನುವಾದ ಕೃತಿಗಳು ಎಲ್ಲವೂ ಕಾರಣಗಳಾಗಿವೆ. ಒಂದು ವರ್ಷದ ಹಿಂದೆ ಅವರ ಈ ಸಾಧನೆಯನ್ನು ಗಮನಿಸಿಯೇ ಕರಾವಳಿಯ ಸಾಹಿತ್ಯಾಸಕ್ತರು ಜೊತೆಗೂಡಿ 'ಚಂದ್ರಗಿರಿ' ಎಂಬ ಅಭಿನಂದನಾ ಗ್ರಂಥವನ್ನು ಹೊರತಂದಿದ್ದಾರೆ. ಇವರ ಇತ್ತೀಚಿನ ಕೃತಿ 'ಹೊತ್ತು ಕಂತುವ ಮುನ್ನ' ಅವರ ಆತ್ಮಕಥನ. ಲೇಖಕಿಯರ ಆತ್ಮಕಥನದ ಹೆಜ್ಜೆಗುರುತುಗಳು ಪಡುಕೋಣೆ ವಾಸಂತಿಬಾಯಿ ಅವರಿಂದ ಆರಂಭ ವಾಗಿದ್ದು, ಇದುವರೆಗೆ ಸಾಹಿತ್ಯ, ರಂಗಭೂಮಿ, ಸಂಗೀತ ಮುಂತಾದ ವಿಭಿನ್ನ ಕ್ಷೇತ್ರಗಳ ಸಾಧಕಿಯರನ್ನು ಒಳಗೊಂಡಂತೆ ಇಳಿಕ್ಕೂ ಮಿಕ್ಕಿ ಆತ್ಮಕಥನಗಳು ಬಂದಿವೆ. ಅದಕ್ಕೆ ಸಾರಾ ಅಬೂಬಕ್ಕರ್ ಅವರ ಈ ಕೃತಿ ಹೊಸ ಸೇರ್ಪಡೆಯಾಗಿದೆ.

ಹಾಗೆ ನೋಡಿದರೆ ಇದು ಸಾರಾ ಅವರ ಮೊದಲ ಆತ್ಮಕಥೆ ಬರಹವಲ್ಲ. ಲಂಕೇಶ್ ಪತ್ರಿಕೆಯಲ್ಲಿ ಅವರು ಬರೆದ ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು ಲೇಖನವೇ ಅವರ ಆತ್ಮಕಥನದ ಆರಂಭದ ಹೆಜ್ಜೆ. ಅದರಲ್ಲಿ ಎಳವೆಯಿಂದ ವಿವಾಹದವರೆಗಿನ ಅವರ ಸ್ಮೃತಿಗಳು ದಾಖಲಾಗಿವೆ. ಕರಾವಳಿ ಭಾಗದ ಮಲಯಾಳ ಭಾಷಿಕ ಮುಸ್ಲಿಂ ಹೆಣ್ಣುಮಕ್ಕಳ ದಾಖಲಾತಿಯಾಗಿ ಈ ಬರಹಕ್ಕೆ ಹೆಚ್ಚಿನ ಮಹತ್ವ ಪ್ರಾಪ್ತವಾಗಿದೆ. ಅನಂತರ ಲೇಖಲೋಕಕ್ಕೆ ಸಾರಾ ಬರೆದ ಲೇಖನ ಎರಡನೆಯದು. ಇದರಲ್ಲಿ ಅವರ ವಿವಾಹಾನಂತರದ ಬದುಕಿನ ಏರು-ಇಳಿತಗಳ ಸ್ವಲ್ಪಮಟ್ಟಿನ ದಾಖಲಾತಿ, ಬುರ್ಕಾ ಪದ್ಧತಿಗೆ ಸಾರಾ ಅವರ ಮುಖಾಮುಖಿ ಮತ್ತು ಬಿಡುಗಡೆ ಹಾಗೂ ಅವರ ಬರವಣಿಗೆ ಲೋಕದಲ್ಲಿ ಎದುರಾದ ಬಿಕ್ಕಟ್ಟುಗಳು ಮುಂತಾದ ವಿಚಾರಗಳು ದಾಖಲಾಗಿವೆ. 'ಚಂದ್ರಗಿರಿ' ಅಭಿನಂದನಾ ಗ್ರಂಥದಲ್ಲಿ ಅವರು ಬರೆದ ಹೆಜ್ಜೆಹಾದಿ ಲೇಖನ ಕೂಡಾ ಅವರ ಆತ್ಮಕಥನದ ಮುಂದುವರಿಕೆಯಾಗಿದೆ. ಹೀಗಾಗಿ 'ಹೊತ್ತು ಕಂತುವ ಮುನ್ನ' ಎಂಬ ಪೂರ್ಣಪ್ರಮಾಣದ ಆತ್ಮಕಥನದ ಕುರಿತು ಸಹಜವಾಗಿ ಓದುಗರಲ್ಲಿ ಉತ್ಸಾಹ, ನಿರೀಕ್ಷೆಗಳಿದ್ದವು.

ಕೃತಿಯನ್ನು ಅದರ ವಿಷಯದ ನೆಲೆಯಲ್ಲಿ ಎರಡು ವಿಭಾಗ ಮಾಡಬಹುದು. ಮೊದಲ ವಿಭಾಗ ಎಳವೆಯಿಂದ ತೊಡಗಿ ಲೇಖಕಿಯಾಗಿ ಗುರುತಿಸಿಕೊಳ್ಳುವವರೆಗಿನ ಬದುಕು. ಎರಡನೆಯ ವಿಭಾಗ 'ಚಂದ್ರಗಿರಿಯ ತೀರದಲ್ಲಿ' ಬರೆದ ನಂತರದಿಂದ ಇದುವರೆಗಿನ ಬದುಕು. ಮೊದಲ ಭಾಗದ್ದು ಈಗಾಗಲೇ ಬರಹದ ಮೂಲಕ ಪರಿಚಿತವಾದದ್ದೇ. ಅಲ್ಪಸ್ವಲ್ಪ ವಿವರಗಳ ನೆಲೆಯಲ್ಲಿ ವಿಸ್ತರಣೆ ಮಾತ್ರ ಕಂಡುಬರುತ್ತದೆ. ಎರಡನೆಯ ಭಾಗದ ಕೆಲವಿಚಾರಗಳು ಕೂಡಾ ಈಗಾಗಲೇ ಗೊತ್ತಿರುವವುಗಳೇ. ಅನಂತರದ್ದೆಲ್ಲ ತನ್ನ ಕೃತಿಗಳ ರಚನೆಯ ಹಿನ್ನೆಲೆ, ಪಡೆದ ಪ್ರಶಸ್ತಿ, ಮೋಸಹೋದ ಸಂದರ್ಭ ಇತ್ಯಾದಿಗಳಿಗೆ ಮೀಸಲಾಗಿದೆ. ಈ ಆತ್ಮಕಥೆಯನ್ನು ಓದಿದಾಗ ಅವರ ಒಳ ಮತ್ತು ಹೊರಜಗತ್ತು ಎರಡೂ ಒಂಟಿತನದಿಂದ ಕೂಡಿದ ಗಾಢ ಅನುಭವವಾಗುತ್ತದೆ. ಬಂಧುತ್ವದ ನೆಲೆಯಲ್ಲಾಗಲಿ, ಹವ್ಯಾಸಗಳ ನೆಲೆಯಲ್ಲಾಗಲಿ ಅವರನ್ನು ಗಾಢವಾಗಿ ಪ್ರಭಾವಿಸಿದ, ಪ್ರೀತಿಯನ್ನು ಹಂಚಿಕೊಂಡ ವ್ಯಕ್ತಿಗಳು ಇಲ್ಲವೆನ್ನುವಷ್ಟು ವಿರಳ! ಹೀಗೆ ಅವರ ಭಾವಪ್ರಪಂಚವು ಅಂಚಿಗೆ ಸರಿದಿರುವುದು ವೈಯಕ್ತಿಕ ಸ್ವಭಾವದ ಕಾರಣಕ್ಕೂ ಇರಬಹುದು, ಪ್ರಾದೇಶಿಕ ಸಂಸ್ಕೃತಿಯ ಕಾರಣಕ್ಕೂ ಇರಬಹುದು ಅಥವಾ ಸ್ವನಿರ್ಬಂಧ (Self censorship)ದ ಕಾರಣಕ್ಕೂ ಇರಬಹುದು. ಹೀಗಾಗಿ ಅವರೇ ಕೇಂದ್ರವಾದ ಈ ಜಗತ್ತಿನಲ್ಲಿ ಜನರಿಲ್ಲ; ಇರುವ ಕೆಲವರಿಗೂ ಮುಖಗಳಿಲ್ಲ, ವ್ಯಕ್ತಿತ್ವಗಳಿಲ್ಲ! ಅವರು ದೀರ್ಘಕಾಲ ಒಡನಾಡಿದ ಸಹಲೇಖಕಿಯರೂ ಇದರಲ್ಲಿಲ್ಲ; ಅವರ ಸಮುದಾಯದ ಇತ್ತೀಚೆಗೆ ಬರೆಯುತ್ತಿರುವ ಲೇಖಕಿಯರಿಗೂ ಈ ಜಗತ್ತಿನಲ್ಲಿ ಪ್ರವೇಶವಿಲ್ಲ. ಇನ್ನೂ ವಿಶೇಷವೆಂದರೆ, ಸಾರಾ ಅಬೂಬಕ್ಕರ್ ಅವರ ಬರಹ ಮತ್ತು ವೈಚಾರಿಕತೆಗೆ ಉದ್ದಕ್ಕೂ ಒತ್ತಾಸೆ ನೀಡಿದ, ಅವರ ಬೆಂಬಲಕ್ಕೆ ನಿಂತ ಎಡಪಂಥೀಯ ಸಂಘಟನೆಗಳು, ಕನ್ನಡ ಸಾಹಿತ್ಯ ಲೋಕದ ಹಿರಿಯರು ಯಾರೂ ಆತ್ಮಕಥನದಲ್ಲಿ ಜಾಗ ಪಡೆದಿಲ್ಲ! ಹಾಗಾಗಿ ಕೃತಿ ಜೀವನಚರಿತ್ರೆಯ ಜಾಡು ಹಿಡಿದಿದೆಯೇ ಹೊರತು, ಆತ್ಮಾವಲೋಕನದ ಕಡೆಗೆ ಇನಿತೂ ಆಸಕ್ತಿವಹಿಸಿಲ್ಲ.

ಸಾರಾ ಅವರು ತಮಗೆ ಸರಿಕಂಡದ್ದನ್ನು ಮಾಡುತ್ತ, ಸರಿ ಎನಿಸದ್ದನ್ನು ಖಂಡಿಸುತ್ತ ಬಂದವರು. ಆದರೆ ತಮ್ಮ ಸಾಹಿತ್ಯದ ಕುರಿತು ಬಂದ ವಿಮರ್ಶೆ, ಟೀಕೆಗಳನ್ನು ಎದುರಿಸುವ ಪರಿಪಕ್ವತೆಯನ್ನು ಅವರಿನ್ನೂ ಹೊಂದಿಲ್ಲದಿರುವುದಕ್ಕೆ ಆತ್ಮಕಥನದಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಅವರ ಗಮನಕ್ಕೇ ತಾರದೆ ಅವರ ಕಥೆಗಳನ್ನು ದೂರದರ್ಶನದಲ್ಲಿ ಪ್ರಸಾರ ಮಾಡಿದ, ಅವರ ಕಾದಂಬರಿಗಳನ್ನು ಅನುವಾದ ಮಾಡಿದ, ಅದರ ಕೃತಿಸ್ವಾಮ್ಯವನ್ನು ತಮ್ಮದಾಗಿಸಿಕೊಂಡ ಘಟನೆಗಳು ಸಾರಾ ಅವರಿಗೆ ತಿಳಿದಾಗಲೆಲ್ಲ, ಕಾನೂನಿನ ಸಮರವನ್ನು

ಸಾರಿ ಅಂಥವರಿಗೆ ಸಾರಾ ಬುದ್ಧಿಕಲಿಸಿದ ವಿವರಗಳು ನಮ್ಮ ಮೆಚ್ಚುಗೆಗೆ ಪಾತ್ರವಾಗುವುದು ಮಾತ್ರವಲ್ಲ; ಮುಂದಿನ ಹಲವರಿಗೆ ಮಾರ್ಗದರ್ಶಿಯಾಗುತ್ತವೆ. ಆದರೆ ಇಂಥ ಮೋಸಗಳಿಗೆಲ್ಲ ತಾನು ಹೆಣ್ಣು ಅದರಲ್ಲೂ ಮುಸ್ಲಿಂ ಸಮುದಾಯದಿಂದ ಬಂದವಳು ಎಂಬುದೇ ಕಾರಣ ಎಂಬ ದೃಢ ನಿರ್ಧಾರವನ್ನು ಸಾರಾ ಕೃತಿಯಲ್ಲಿ ಹಲವು ಸಂದರ್ಭಗಳಲ್ಲಿ ವ್ಯಕ್ತಪಡಿಸಿದ್ದಾರೆ. ಇದೊಂದು ಚರ್ಚಾಸ್ಪದವಾದ ಸಂಗತಿ. ಯಾರೋ ಕೆಲವರ ಕಾರಣಕ್ಕೆ ಅವರು ಒಟ್ಟು ಸಮುದಾಯವನ್ನೆ ದೋಷಿಯಾಗಿ ನಿಲ್ಲಿಸುವುದು ಸರಿಯೇ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ.

ಇಲ್ಲೇ ಇನ್ನೊಂದು ಪ್ರಶ್ನೆ ಏಳುತ್ತದೆ. ಸಾರಾ ಅಬೂಬಕ್ಕರ್ ತಮ್ಮನ್ನು ತಾವು ಮುಸ್ಲಿಂ ಲೇಖಕಿ ಎಂಬ ಸೀಮೆಗೆ ಕಟ್ಟಿಹಾಕಿ ಕೊಂಡಿದ್ದಾರೆಯೇ? ಹಾಗೆ ನೋಡಿದರೆ ಅವರ ಚಿಂತನೆ, ಬರಹ, ವಿಚಾರಗಳನ್ನು ಮುಸ್ಲಿಂ ಸಮುದಾಯದವರು ಬೆಂಬಲಿಸಿದ್ದಕ್ಕಿಂತ ಒಟ್ಟು ಕನ್ನಡಿಗರು ಬೆಂಬಲಿಸಿದ್ದಾರೆ, ಅಭಿಮಾನ ಪಟ್ಟಿದ್ದಾರೆ. ಅದರ ಕುರುಹಾಗಿ ಸನ್ಮಾನ, ಪ್ರಶಸ್ತಿ ನೀಡಿ ಗೌರವಿಸಿದ್ದಾರೆ. ಬದುಕಿನ ಬಹಳಷ್ಟು ಪಕ್ವಕಾಲವನ್ನು ಕನ್ನಡಿಗರೊಂದಿಗೆ, ಕನ್ನಡದ ಓದುಗ ರೊಂದಿಗೆ ಕಳೆದ ಸಾರಾ ಅವರು ತಮಗಾದ ಮೋಸ, ವಂಚನೆ ಗಳಿಗೆಲ್ಲ ತಾನು ಹೆಂಗಸು, ಅದರಲ್ಲೂ ಮುಸ್ಲಿಂ ಹೆಣ್ಣುಮಗಳು ಎಂಬುದೇ ಕಾರಣ ಎಂಬ ನಿಲುವಿಗೆ ಬರುವುದು ಅವರ ವೈಚಾರಿಕ ನಿಲುವಿಗೇ ವಿರುದ್ಧವಾಗಿದೆ; ಜಾತ್ಯತೀತ ಮನಸ್ಸಿನ ಎಲ್ಲರ ನೋವಿಗೂ ಇದು ಕಾರಣವಾದರೆ ಅಚ್ಚರಿಯಿಲ್ಲ.

ಅನೇಕ ಸಂದರ್ಭಗಳಲ್ಲಿ ಒಂದು ವಿಷಯದ ಏಕಮುಖ ಸತ್ಯವನ್ನು ಕೇಳಿ ಆತುರದ ತೀರ್ಮಾನ ಪ್ರಕಟಿಸುವುದು, ತಮ್ಮ ಕೃತಿಯ ತಮಿಳು ಅನುವಾದ ಕೃತಿಗೆ ಬಂದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮೂಲಕೃತಿಗೆ ಬಾರದ್ದಕ್ಕೆ ದೂರುವುದು, ಬೆಂಗಳೂರಿನಲ್ಲಿ ಸೈಟಿಗಾಗಿ, ರಾಜ್ಯಸಭೆ ಸದಸ್ಯತ್ವಕ್ಕಾಗಿ ಆಸೆ ಇಟ್ಟುಕೊಂಡು ದೊರಕದ ಬಗ್ಗೆ ವಿಷಾದಿಸುವುದು, ತನ್ನ ಪುಸ್ತಕಗಳನ್ನು ಕೊಳ್ಳದವರ ಬಗ್ಗೆ ದೂರುವುದು–ಇಂಥ ಸಣ್ಣತನ ಗಳನ್ನು ಸಾರಾ ಅಬೂಬಕ್ಕರ್ ಕನಿಷ್ಠ ಆತ್ಮಕಥನದ ಬರೆಹ ದಲ್ಲಾದರೂ ಮೀರಿದ್ದರೆ ಕನ್ನಡದ ವಿದ್ವಾಂಸರು, ಓದುಗರು, ಲೇಖಕರು ಒಟ್ಟಾಗಿ ಅವರಿಗೆ ನೀಡಿದ ಬೆಂಬಲಕ್ಕೆ ಬೆಲೆ ಇರುತ್ತಿತ್ತು.

ಸಾರಾ ಅವರ ಬರಹ ಗೆಲ್ಲುವುದು ಎಲ್ಲ ಧರ್ಮಗಳ ಮೂಲಭೂತವಾದವನ್ನು ಪ್ರಶ್ನಿಸುವ ಮತ್ತು ವಿರೋಧಿಸುವ ಕಾರಣಕ್ಕೆ, ಅನ್ಯಾಯವನ್ನು ಕಂಡಲ್ಲೆಲ್ಲ ಸಿಡಿದೆದ್ದು ಕಾನೂನಿನ ಸಮರಕ್ಕೆ ಮುಂದಾಗುವ ಕಾರಣಕ್ಕೆ ಹಾಗೂ ಕೇರಳ ಮತ್ತು ಕರಾವಳಿ ಕರ್ನಾಟಕದ ಮುಸ್ಲಿಮರ ಬದುಕಿನ ಅವಸ್ಥಾಂತರಗಳ ದಾಖಲಾತಿಗಾಗಿ ಎಂಬುದನ್ನು ಮರೆಯುವಂತಿಲ್ಲ. ಒಟ್ಟಿನಲ್ಲಿ ಹಲವು ಚರ್ಚೆಗಳನ್ನು ಹುಟ್ಟುಹಾಕುವ ಶಕ್ತಿ ಈ ಕೃತಿಗಿದೆ. ●

ನನ್ನ ಪರಿಸ್ಥಿತಿ, ನನ್ನ ಸಾಮಾಜಿಕ ಪರಿಸ್ಥಿತಿ, ನಾನು ಯಾರಿಂದ ನನ್ನ ಅನುಭವಗಳನ್ನು ಪಡೆದೆನೊ ಅವರ ಶಕ್ತಿ ಹಾಗೂ ಮಿತಿಗಳನ್ನು ಅರ್ಥ ಮಾಡಿಕೊಳ್ಳಲು ನನಗೆ ಇರುವ ಒಂದೇ ಮಾರ್ಗ ಬರವಣಿಗೆ, ಬರವಣಿಗೆ ಒಂದು ಹುಡುಕಾಟ.

ವೈದೇಹಿ
ಸಂದರ್ಶನವೊಂದರಲ್ಲಿ
('ಜಸ್ಟ್ ಬಿಟ್ವೀನ್ ಅಜ್' ಪುಸ್ತಕದಿಂದ)

# ನೋ ಸ್ಪೇಸ್ *(No Space)*

ತವರಿನಲಿ,
ಅಪ್ಪ ಅಮ್ಮರ ಪ್ರೀತಿಯಿದ್ದರೂ
ಇರಲು ಜಾಗವಿಲ್ಲ
ಯಾಕೆಂದರೆ,
ಅವಳನ್ನು ಬೆಳೆಸಿದ್ದೇ
ಬೇರೆ ಮನೆಗೆ ಕೊಡಲು!

ಇರುವ ಜಾಗದಲ್ಲೇ
ನಲನಲಿಸಿ ಓಡಾಡಿದಳು
ಸಂದಿಗೊಂದಿಲಿ ಕೂತು
ಗಂಡನ ಕನಸು ಕಂಡಳು
ಮದುವೆಯ ಕನಸಿನಲ್ಲೇ
ಮೈದುಂಬಿ ಬೆಳೆದಳು

ಗಂಡನ ಮನೆಯಲ್ಲಿ
ಮಲಗು ಕೋಣೆಯಲ್ಲಿ
ಎರಡಂಗುಲ ಜಾಗ!
ಮಕ್ಕಳ ಹೆರುತ್ತ
ಸಂಸಾರ ಬೆಳೆಸಬೇಕಲ್ಲ!

ಅಡುಗೆ ಮನೆಯಂತೂ
ಸಂಪೂರ್ಣ ಅವಳದೇ...
ಅದು ನಿಂತು ಚಿಂತಿಸುವ
ಖುಷಿಯ ತಾಣವಲ್ಲ
ಚಿಂತನೆಗೆ ನಿಂತಲೋ
ಒಗ್ಗರಣೆ ಕರಿಕಲು!

ಗಂಡನ ಪ್ರೀತಿಯಂತೂ
ಮನೆತುಂಬ ಓಡಾಡುತ್ತದೆ
ಆದರೆ,
ಆಕೆ ತುದಿಗಾಲಲ್ಲಿ ನಿಂತು
ಸೇವೆ ಮಾಡಬೇಕು
ಪ್ರೀತಿಯ ಕಾವ್ಯ ಬರೆಯಲು
ತಾಣವೆಲ್ಲಿದೆ ಹೇಳಿ!

ಅದಕ್ಕೆಂದೇ ಅವಳು
ಅಕ್ಷರ ಕಲಿಯದೆ
ಪುಸ್ತಕ ಬರೆಯದೆ
ಬೇರೆ ಹೆಣ್ಣುಗಳ ಬಗ್ಗೆ
ಹೊಟ್ಟೆಕಿಚ್ಚು ಪಡುತ್ತ
ಕಟ್ಟೆ ಪಂಚಾಯ್ತಿ ಮಾಡುತ್ತ
ಕರಗಿ ಹೋಗುತ್ತಾಳೆ.

■ ಎಸ್. ಮಾಲತಿ ಸಾಗರ



# ಮಾಧ್ಯಮ ಮತ್ತು ಮಹಿಳೆ

■ ಸಿ.ಜಿ. ಮಂಜುಳಾ

*(ಹಿಂದಿನ ಸಂಚಿಕೆಯಿಂದ)*

ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ವ್ಯಕ್ತವಾಗಿದ್ದ ಕಾಳಜಿ, ಸ್ವಾತಂತ್ರ್ಯಾನಂತರ ಕಾಲದಲ್ಲಿ ಹೆಣ್ಣುಮಕ್ಕಳು ವಿದ್ಯಾವಂತರಾಗಿ ಉದ್ಯೋಗಗಳಿಗೆ ಸೇರತೊಡಗಿದಂತೆ ವ್ಯಕ್ತವಾಗಿರುವ ಹೆಣ್ಣುಮಕ್ಕಳು ಸುಶಿಕ್ಷಿತರಾದರೂ ಉದ್ಯೋಗಗಳಿಗೆ ಸೇರುವುದು ಸಂಸಾರದ ದೃಷ್ಟಿಯಿಂದ ಅಷ್ಟು ಸರಿಯಿಲ್ಲವೆಂಬ ಭಾವನೆ ವ್ಯಕ್ತಪಡಿಸುವ ತಿ.ತಾ. ಶರ್ಮರ ಈ ಬರಹ ಆಲೋಚನೆ ಮಾಡಲು ಕರೆ ನೀಡಿದೆ:

"ಸ್ವಾತಂತ್ರ್ಯ ಸಾಧಿಸಿದ ಅನಂತರ ರಾಷ್ಟ್ರದಲ್ಲೇ ಶಾಲೆಗಳೂ, ಕಾಲೇಜುಗಳೂ ಬೆಳೆಯುತ್ತಿವೆ. ಶಾಲೆಗಳೂ, ಕಾಲೇಜುಗಳೂ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ತುಂಬಿ ಹರಿಯುತ್ತಿವೆ. ದಿನ ಬೆಳಗಾದರೆ ಒಂದು ಹೊಸ ವಿಶ್ವವಿದ್ಯಾನಿಲಯ... ವರ್ಷವರ್ಷವೂ ಓದುವವರ ಸಂಖ್ಯೆ ಏರುತ್ತಿದೆ. ಬಾಲಕರಿಗೆ ಸಮಸಮವಾಗಿ ಬಾಲಕಿಯರೂ, ಶಾಲಾ ಕಾಲೇಜುಗಳ ಪ್ರವೇಶ ಮಾಡಿ ಓದಿ ಪದವೀಧರರಾಗುತ್ತಿದ್ದಾರೆ. ಇದೆಲ್ಲ ನಮ್ಮ ಸಂತೋಷಕ್ಕೆ ಕಾರಣವೆಂಬುದೇನೋ ನಿಜ. ಆದರೆ ಈ ವಿದ್ಯಾಪ್ರಗತಿಯು ಸಮಾಜದ ಮೇಲೆ ಉಂಟು ಮಾಡುತ್ತಿರುವ ಪರಿಣಾಮ ಕುರಿತು ಹೆಚ್ಚಾಗಿ ಯಾರೂ ಆಲೋಚನೆ ಮಾಡುತ್ತಿಲ್ಲ. ಸವಾಜದ ಮೇಲಿನ ಪರಿಣಾಮ ಹಾಗಿರಲಿ ಸಂಸಾರಗಳ ಮೇಲಾಗುತ್ತಿರುವ 'ಪ್ರಚಂಡ ಪರಿಣಾಮ'ವೇನೆಂಬುದನ್ನು ತಿಳಿದುಕೊಳ್ಳಲು ಅನೇಕರು ಹಿಂಜರಿಯುತ್ತಾರೆ.

"...ಪ್ರತಿಯೊಬ್ಬರೂ ಸರ್ಕಾರಿ ಉದ್ಯೋಗವನ್ನು ಅಪೇಕ್ಷಿಸುತ್ತಾರೆ. ಗಂಡಸರೇ ಅಲ್ಲ, ಹೆಂಗಸರೂ ಅಪೇಕ್ಷಿಸುತ್ತಾರೆ. ಎಲ್ಲ ಉದ್ಯೋಗ ಕ್ಷೇತ್ರಗಳಲ್ಲೂ ಇಂದು ಗಂಡಸರಿಗೂ ಹೆಂಗಸರಿಗೂ ಪೈಪೋಟಿ ಆರಂಭವಾಗಿದೆ. ಎಲ್ಲ ಆಡಳಿತ ಶಾಖೆಗಳಲ್ಲೂ ಈ ಪೈಪೋಟಿ ನಡೆಯುತ್ತಿದೆ. ಎಲ್ಲ ಹಂತಗಳಲ್ಲೂ ನಡೆಯುತ್ತಿದೆ. ಇದು ಸಾಂಸಾರಿಕ ಜೀವನಕ್ಕೆ, ಸುಖ-ಸಂತೋಷ ಜೀವನಕ್ಕೆ ಹಿತಕಾರಿಯೆ-ಎಂಬುದನ್ನು ಕುರಿತೂ ಪ್ರತಿಯೊಬ್ಬ ಗಂಡ, ಪ್ರತಿಯೊಬ್ಬ ಹೆಂಡತಿ ನಿಸ್ಸಂಕೋಚವಾಗಿ ವಿಚಾರ ಮಾಡಬೇಕು... ಇನ್ನೊಂದು ದೃಷ್ಟಿಯಿಂದಲೂ ಸಮಾಜ ಹಿತೈಷಿಗಳೆಲ್ಲಾ ಈ ಸಾಮಾಜಿಕ 'ವಿಪ್ಲವ' ಕುರಿತು ವಿಚಾರ ಮಾಡಬೇಕು. ... ಇಂದಿನ ಬಾಲಕ-ಬಾಲಕಿಯರಲ್ಲಿ ಕಂಡುಬರುತ್ತಿರುವ ಅವಿಧೇಯತೆ, ಅವಿನಯ, ಸ್ವಚ್ಛಂದ ವೃತ್ತಿ, ಭೋಗ ಜೀವನಾಪೇಕ್ಷೆ, ನಾಸ್ತಿಕ್ಯ-ಇವಕ್ಕೆಲ್ಲ ಕಾರಣ ಬಾಲ್ಯದಲ್ಲಿ ಮಕ್ಕಳಿಗೆ ಇಂದು ಅಭಾವವಾಗಿರುವ ತಾಯಿಯ ಮಡಿಲು, ತೊಟ್ಟಿಲ ತೂಗು, ತಂದೆ ತಾಯಿಗಳ ವಾತ್ಸಲ್ಯಾಮೃತ.

"ಹೆಚ್ಚು ವಿವರಣೆ ಬೇಡ. ಹೆಣ್ಣುಮಕ್ಕಳು ಸಂಪಾದನೆಯೊಂದನ್ನೇ ಲಕ್ಷ್ಯದಲ್ಲಿಟ್ಟುಕೊಳ್ಳಬೇಕೆ? ಇಲ್ಲ ಸುಖಸಂಸಾರ ಸೌಭಾಗ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕೆ? ಇದನ್ನು ಕುರಿತು ಆಲೋಚನೆ ಮಾಡಬೇಕು. ಹೆಣ್ಣುಮಕ್ಕಳು ವಿದ್ಯಾವಂತರಾಗಲಿ; ಆಗಬೇಕು. ಆದರೆ ಉದ್ಯೋಗ ಸಂಪಾದನೆಯೊಂದೇ ವಿದ್ಯಾರ್ಜನೆಯ ಪರಮಾದರ್ಶವೇ?..." ಎಂಬ ಪ್ರಶ್ನೆ ಕೇಳುತ್ತಾರೆ. (ಪ್ರಜಾಮತ, 1971, ಮಧ್ಯಪುಟದ ಲೇಖ; ತಿ.ತಾ. ಶರ್ಮರಿಂದ; ಕನ್ನಡ ಪತ್ರಿಕಾ ಸೂಚಿ, ಪುಟ 113).

ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ನಾಟಕ ಎಂಬ ಖ್ಯಾತಿಗೆ ಪಾತ್ರವಾದ ಮುಂಬೈಸಿಂದ 1887ರಲ್ಲಿ ಪ್ರಕಟವಾದ 'ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ'ದ ಕರ್ತೃ ಕರ್ಕಿ ವೆಂಕಟರಮಣ ಶಾಸ್ತ್ರಿಗಳು 'ಹವ್ಯಕ ಸುಬೋಧ' ಹಾಗೂ 'ಹಿತೋಪದೇಶ' ಎಂಬ ಎರಡು ಪತ್ರಿಕೆಗಳನ್ನು ನಡೆಸಿದರು. ಹೊಸಯುಗಕ್ಕೆ ಅನುಸಾರವಾದ ವಿಷಯ ವಿವೇಚನೆ ಹಾಗೂ ಪತ್ರಿಕಾ ಧೋರಣೆಗಳನ್ನು ಇವು ಹೊಂದಿದ್ದವು. ಅಧಿಕಾರಿಗಳ ಭೋಗವಸ್ತುವಾಗಿ ಹೆಣ್ಣಿನ ಬಳಕೆಯ ಬಗ್ಗೆ ಖಾರವಾದ ಟೀಕೆ ಇವರ ಪತ್ರಿಕೆಯಲ್ಲಿ ಬಂದಿದೆ. 'ಹವ್ಯಕ ಸುಬೋಧ'ದ 30-7-1888ರ ಸಂಚಿಕೆಯಲ್ಲಿ ಅಧಿಕಾರಿಗಳ ಸ್ತ್ರೀ ವ್ಯಾಮೋಹವನ್ನು ಪ್ರಸ್ತಾಪಿಸಿದ್ದಾರೆ. "ಇವರಿಗೆ ಹೆಣ್ಣುಗಳನ್ನು ಒದಗಿಸುವ ಹೇಯವಾದ ಪರಿಸ್ಥಿತಿ ಇದೆ. ಅಲ್ಲದೆ ಜನರು ತಮ್ಮ ಕೆಲಸವಾಗಬೇಕಾದರೆ ಈ ಉಪಪತ್ನಿಯರನ್ನು ಖುಷಿಯಲ್ಲಿಡಬೇಕಾಗುತ್ತದೆ. ಸರಕಾರೀ ಕೆಲಸಗಳಲ್ಲಿ ಇಂಥ ಸ್ತ್ರೀಯರ ಅಪ್ರತ್ಯಕ್ಷ ಪ್ರಭಾವವೇ ಅತಿಯಾಗಿರುವ ಸಂದರ್ಭಗಳೂ ಇವೆ. ಫಿರ್ತಿಯ ಮೇಲೆ ಹೋದ ಅಧಿಕಾರಿಗಳನ್ನು ತೃಪ್ತಿಪಡಿಸಬೇಕಾದರೆ ರೈತಾಪಿ ಜನರಿಗೂ ಗ್ರಾಮಾಧಿಕಾರಿಗಳಿಗೂ ಸಾಕುಬೇಕಾಗುತ್ತದೆ. ಆಗ ಇವರಿಗೆ ಹೆಣ್ಣನ್ನು ಒದಗಿಸಬೇಕು. ಒಮ್ಮೊಮ್ಮೆ ತಾವೇ ಬರುವಾಗ ಕರೆತರುತ್ತಾರೆ" ಎಂದಿದ್ದಾರೆ.

20-8-1889ರಲ್ಲಿ ಮತ್ತೊಮ್ಮೆ ಈ ಬಗ್ಗೆ ಬರೆಯುತ್ತಾ, "ಇದರಲ್ಲಿ ಸಂಶಯವಿದೆಯೆ? ನಡೆದ ಘಟನೆಯೊಂದನ್ನು ಕೊಡುತ್ತೇವೆ. ತಾ. 20-3-1888ನೇ ದಿವಸ ಶಫರ್ಡ್ ಕಂಪೆನಿಯವರ ಸ್ಟೀಮರಿನಲ್ಲಿ ನಾನು ಕಣ್ಣಾರೆ ಕಂಡದ್ದು, ಇದು ಓರ್ವ ಫಾರೆಸ್ಟ್ ಆಫೀಸರನು ಅಂಕೋಲೆ ಕಡೆಯ ಓರ್ವ ಅನೀತಿಯ ಹೆಣ್ಣನ್ನು ಜೊತೆಗೆ ಕರೆತಂದು ಒಂದನೇ ತರಗತಿಯ ಕಂಪಾರ್ಟಮೆಂಟನ್ನು ರಿಸರ್ವ್ ಮಾಡಿಸಿ, ಕರ್ನ್ಯಾಕ್ ಬಂದರಿಗೆ (ಮುಂಬಯಿಗೆ) ಹೊರಟಿದ್ದ. ಯಾವದೇ ನಾಚಿಕೆ-ಹೇಸಿಗೆಗಳಿಲ್ಲದೆ ಬಹಿರಂಗವಾಗಿ ಅವಳೊಡನೆ ಲಲ್ಲೆಗೈಯುತ್ತಿದ್ದುದನ್ನು ಕಂಡು ಇತರ ಪ್ರವಾಸಿಗರು ಜಿಗುಪ್ಸೆ ಪಟ್ಟರು. ಆ ಅಧಿಕಾರಿ ಯಾರು, ಇತ್ಯಾದಿ ವಿವರಗಳು ಸರಕಾರಕ್ಕೆ ಬೇಕಾದರೆ ನಾನು ಕೊಡಲು ಸಿದ್ಧನಿದ್ದೇನೆ" ಎಂದು ಘೋಷಿಸಿದರು. ಈ ಪ್ರಕರಣದ ವರದಿಗಾರಿಕೆಯೊ ಅಥವಾ ಮತ್ತಾವುದೋ ಪ್ರಕರಣವೊ ಒಟ್ಟಾರೆ ಆ ನಂತರ ಸರಕಾರವು ವೆಂಕಟರಮಣ ಶಾಸ್ತ್ರಿಗಳನ್ನಂತೂ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಿತು ಎಂಬ ಅಪೂರ್ಣ ಮಾಹಿತಿ ಮಾತ್ರ ಈಗ ಲಭ್ಯವಿದೆ. ನಂತರ ಶಾಸ್ತ್ರಿಗಳು ಮುಂಬಯಿಯನ್ನೇ ಬಿಟ್ಟು ಪುಣೆಯಲ್ಲಿ ಕೆಲ ಕಾಲ ವೈದ್ಯಕೀಯ ವೃತ್ತಿ ಮಾಡಿಕೊಂಡು ಇದ್ದರಂತೆ. (ಶ್ರೀ.ಯ.ಕನ್ನಡ ಪತ್ರಿಕಾ ಸೂಚಿ ಪುಟ 129).

'ಕಥಾಂಜಲಿ' ಹಾಗೂ 'ಪ್ರಜಾಮತ' ಪತ್ರಿಕೆಗಳ ಸಂಸ್ಥಾಪಕರಾದ ಬಿ.ಎನ್. ಗುಪ್ತ ಅವರು ಸೆಪ್ಟೆಂಬರ್ 1931ರ 'ಕಥಾಂಜಲಿ'ಯ ಸಂಪಾದಕೀಯ ಲೇಖನದಲ್ಲಿ ಹೀಗೆ ಬರೆಯುತ್ತಾರೆ: "ಕರ್ನಾಟಕದಲ್ಲಿ ಸ್ತ್ರೀ ಲೇಖಕ(ಕಿ)ರ ಕೊರತೆಯು ಇನ್ನೂ ತಪ್ಪಿಲ್ಲ. ಜೀವನದ ಸುಖ ದುಃಖಗಳನ್ನೂ, ಗಹನ ಸಮಸ್ಯೆಗಳನ್ನು ಸ್ತ್ರೀ ದೃಷ್ಟಿಯಿಂದ ಅವಲೋಕಿಸಿ, ಆ ವಿಚಾರವಾಗಿ ಸ್ತ್ರೀಯರ ಭಾವನೆಗಳನ್ನು ಪ್ರದರ್ಶಿಸಿ, ನಮ್ಮ ಸಾಹಿತ್ಯದ ದೃಷ್ಟಪಥವು ವಿಸ್ತಾರಗೊಳ್ಳುವಂತೆ ಮಾಡುವ ಕಾರ್ಯವು ನಮ್ಮ ತಂಗಿಯರನ್ನವಲಂಬಿಸಿದೆ. ಸುಶಿಕ್ಷಿತ ಸ್ತ್ರೀಯರನೇಕರು ಲೇಖನವನ್ನು ಬರೆಯುವುದರಲ್ಲಿ ತೊಡಗಿ, ಈ ಕೊರತೆಯನ್ನು ಹೋಗಲಾಡಿಸುವ ರೆಂದು ನಂಬುತ್ತೇನೆ."

### ಓದುಗರ ಧ್ವನಿ

ಓದುಗರಿಂದ ಹೊಗಳಿಸಿಕೊಂಡವರಲ್ಲಿ ಗಳಗನಾಥರದು ಬಹುದೊಡ್ಡ ಸಾಧನೆ. ತಮ್ಮ ಸದ್ಬೋಧಚಂದ್ರಿಕೆಯ ಆರಂಭದ


ತಿರುಮಲಾಂಬಾ

ವರ್ಷಗಳಲ್ಲಿ ಅದನ್ನು 'ಎತ್ತಿ ಮುದ್ದಾಡಿಸಿದ ಚಂದಾದಾರರು' ಎಂದು ಮೇಲಿಂದ ಮೇಲೆ ಸಂಪಾದಕೀಯ ಟಿಪ್ಪಣಿಗಳಲ್ಲಿ ಹೇಳಿದ್ದಾರೆ. ಮೊದಲ ವರ್ಷ 1908ರ ಏಪ್ರಿಲ್ ತಿಂಗಳಲ್ಲಿ ಸಾವಿರಕ್ಕೂ ಕಡಿಮೆ ಚಂದಾದಾರರಿದ್ದು ಮೂರನೆಯ ವರ್ಷಕ್ಕೇ 2300 ಜನ ಚಂದಾದಾರರನ್ನು ಸಂಪಾದಿಸಿದ ಖ್ಯಾತಿ ಈ ಪತ್ರಿಕೆಯದು. ತಮ್ಮ ಪತ್ರಿಕೆಯನ್ನು ಓರ್ವ ಬಾಲಕಿ ಎಂಬರ್ಥದಲ್ಲಿ ಅಗಡಿ-ಆನಂದವನದಂತಹ ಚಿಕ್ಕಹಳ್ಳಿಯಲ್ಲಿ ಕುಳಿತು ಪ್ರಕಟಿಸುತ್ತಿದ್ದ ಗಳಗನಾಥರು ನಿವೇದಿಸುತ್ತಿದ್ದರು:

"ಮರ(ಮೊರ)ದಲ್ಲಿ ಕೇವಲ ಪರಾಧೀನೆಯಾಗಿ ಮಲಗಿದ್ದ ಚಂದ್ರಿಕೆಯು ಈಗ ಕರ್ನಾಟಕ ಪ್ರಾಂತದಲ್ಲಿ ದುಡುದುಡು ಓಡಾಡಹತ್ತಿದ್ದಾಳೆ. ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ ನಡಿಗೆಯ ವೇಗ, ಮೈಸೂರಲ್ಲಿ ನಡಿಗೆಯ ಗಾಂಭೀರ್ಯ, ಕಾರವಾರ, ಹೈದರಾಬಾದ, ಮದ್ರಾಸಗಳಲ್ಲಿ ನಡಿಗೆಯ ಮಂದತ್ವ, ಇನ್ನು ಕನ್ನಡ ಪ್ರಾಂತಗಳ ಹೊರಗೆ ಬಹುದೂರ ಇದ್ದ ಕನ್ನಡಿಗರು ಕರೆದರೂ ಚಂದ್ರಿಕೆಯು ಬೆದರದೇ ತಟ್ಟನೆ ಹೋಗುತ್ತಿರುವಳು. ಕರೆದವರ ಕೈಯೊಳಗಿನ ಕೂಸು ಆಕೆ."

ಈ ಪತ್ರಿಕೆಯ ಮುಖ್ಯ ಆಕರ್ಷಣೆಯಾಗಿದ್ದುದು ಗಳಗನಾಥರ ಸುರಸ ಕಾದಂಬರಿಗಳು. ಕಮಲ ಕುಮಾರಿ, ವೈಭವ, ಮೃಣಾಲಿನಿ, ಪ್ರಬುದ್ಧ ಪದ್ಮನಯನೆ... ಇತ್ಯಾದಿ. ಈ ಬಗ್ಗೆ ಧಾರವಾಡದ ಕಾಮನಕಟ್ಟೆ ಓಣಿಯ ಯಮುನಾಸಾನಿ ಎಂಬಾಕೆ ಪತ್ರಿಕೆಗೆ ಬರೆದಿರುವ ಪತ್ರ ಇದು:

"ಚಂದ್ರಿಕೆಯು ಹ್ಯಾಗೇ ಇರಲಿ, ಪದ್ಮನಯನಾ ಎಂಬುವ ಕೀರ್ತಿಶಾಲಿ ಮಗಳನ್ನು ಹಡೆದಿದ್ದಾಳೆ. ಈ ಉಭಯಸ್ತ್ರೀಯರನ್ನು ಪುರುಷರು ಸ್ತೋತ್ರ ಮಾಡಿ, ಸಹಾಯ ಮಾಡಲು ಮುಂದೆ ಬಂದದ್ದರಲ್ಲಿ ನನಗೇನೂ ಮಹತ್ವ ಕಾಣುವುದಿಲ್ಲ. ಸ್ತ್ರೀಯರು ಪುರುಷರನ್ನೂ ಪುರುಷರು ಸ್ತ್ರೀಯರನ್ನೂ ವರ್ಣನೆ ಮಾಡುವುದು ಸಾಹಜಿಕವೇ. ಅದಿರಲಿ, ನನಗೆ ಎಂಥ ತ್ರಾಸವಿದ್ದರೂ ಅವರಿಬ್ಬರನ್ನು ನೆನೆದರೆ ಸಾಕು. ಈ ಉಭಯತರನ್ನು ಕಳಿಸಿಕೊಡುವುದರ ದೆಸೆಯಿಂದ ಪತ್ರಾ ಹಾಕಿದ್ದು ಇನ್ನೂ ಕಳಿಸಿಕೊಡಲಿಲ್ಲ. ನಮ್ಮ ತಂಗಿಯರಾದ ಚಂದ್ರಿಕೆ, ಪದ್ಮನಯನಾ ಇವರನ್ನು ಕೂಡ್ಲೇ ಕಳಿಸಿಕೊಡಬೇಕು."

"ಈ ಪತ್ರ ಬರೆದವರು ಯಾರೆಂದು ತಿಳಿದಿದ್ದೀರಿ... ಓಣಿಯ ಹೆಸರನ್ನು ಗಮನಿಸಿರಿ. ನೂರು ವರ್ಷಗಳ ಹಿಂದೆ ಧಾರವಾಡದ ರಸಿಕರು ರಾತ್ರಿ ಸಂಚರಿಸುತ್ತಿದ್ದ ಓಣಿ ಅದು. ಈಗೂ ಈ ಹೆಸರು ಉಳಿದಿದೆ. ಆದರೆ ಸಾನಿಯರಾರೂ ಇಲ್ಲ" ಎಂದು ಡಾ. ಶ್ರೀನಿವಾಸ ಹಾವನೂರರು ಕನ್ನಡ ಪತ್ರಿಕಾ ಸೂಚಿ ಗ್ರಂಥದಲ್ಲಿ ಬರೆಯುತ್ತಾರೆ (ಪುಟ 21).

ಚಂದ್ರಿಕೆ ಆರಂಭವಾದ ನಾಲ್ಕನೆಯ ವರ್ಷದ ಸುರುವಿಗೆ 2300ರಷ್ಟಿದ್ದ ಚಂದಾದಾರರ ಸಂಖ್ಯೆ ಆ ವರ್ಷದ 8-9 ತಿಂಗಳಲ್ಲೇ ನಾಲ್ಕು ಸಾವಿರಕ್ಕೆ ಏರಿತು. ಆ ವರ್ಷದುದ್ದಕ್ಕೂ ಪ್ರತಿದಿನ ಹೊಸ ಚಂದಾದಾರರಿಂದ ಮನಿಆರ್ಡರ್ ಬರುತ್ತಿತ್ತಂತೆ. ಹಾಗೆ ಬಾರದ 'ಬಂಜೆ' ದಿನಗಳೆಂದರೆ ಆ ವರ್ಷದಲ್ಲಿ 7 ಮಾತ್ರ ಎಂದು ವರದಿ ಮಾಡಿದ್ದಾರೆ. ಒಂದು ದಿನವಂತೂ 46 ಮನಿ ಆರ್ಡರ್ ಬಂದಿದ್ದವಂತೆ! ಆ ಹಿಗ್ಗಿನಲ್ಲಿ "ಚಂದಾದಾರರು ಚಂದ್ರಿಕೆಯನ್ನು ಹೊಟ್ಟೆಯ ಮಗಳೆಂದು ತಿಳಿದು ಮನಮುಟ್ಟಿ ಆಕೆಯ ಸುಖ ದುಃಖಗಳನ್ನು ವಿಚಾರಿಸುತ್ತಿರುವರು. ಅಂತೆಯೇ ಹುಡಿಗೆಯು ವರ್ಗಣಿದಾರರೆಂದರೆ ಬಿದ್ದು ಸಾಯುತ್ತದೆ" ಎಂದು ಸಂಚಾಲಕರು ಪರಸ್ಪರ ಹೊಗಳಿಕೊಂಡರಂತೆ. ಚಂದ್ರಿಕೆಯ ಪ್ರಸಾರವು 27 ಜಿಲ್ಲೆಗಳಲ್ಲಿ 160 ಸಬ್‌ಪೋಸ್ಟ್‌ಗಳಲ್ಲಿ 1200 ಊರುಗಳಲ್ಲಿ ಇತ್ತು. ಚಂದಾದಾರರು ಯಾವ ಜಾತಿಗೆ ಸೇರಿದವರು. ನೌಕರರೆ, ವ್ಯಾಪಾರಸ್ಥರೆ, ಕೃಷಿಕರೆ ಇತ್ಯಾದಿ ಹಲವು ಮಾಹಿತಿಗಳನ್ನೂ ಚಂದಾದಾರರ ಬಗ್ಗೆ ನೀಡಲಾಗಿದೆ. ಕೊನೆಯದಾಗಿ ಈ ನಾಲ್ಕು ಸಾವಿರದಲ್ಲಿ 125 ಜನ ಹೆಣ್ಣುಮಕ್ಕಳು ಚಂದಾದಾರರು! (ಯಮುನಾಸಾನಿಯೂ ಸೇರಿದ್ದಂತೆ). ಆಗಿನ ಕಾಲಕ್ಕೆ ಇದೊಂದು ದೊಡ್ಡ ಅಂಕಿಯೇ ಎನ್ನುತ್ತಾರೆ ಶ್ರೀ ಹಾ. (ಕನ್ನಡ ಪತ್ರಿಕಾ ಸೂಚಿ ಪುಟ 74).

ಪತ್ರಿಕೆಗಳ ಈ ಚಾರಿತ್ರಿಕ ಪಾತ್ರ ಹಾಗೂ ಸ್ವಾತಂತ್ರ್ಯ ಹೋರಾಟದ ನಾಯಕತ್ವ ವಹಿಸಿದ ಪತ್ರಕರ್ತರ ಪ್ರಯತ್ನಗಳಿಂದಾಗಿ ಸಾಮ್ರಾಜ್ಯಶಾಹಿ ಸರ್ಕಾರದ ವಿರುದ್ಧ ಪತ್ರಿಕೆಗಳು ಎಂಬಂತಹ ವಿರೋಧಿ ನೆಲೆಯ ಪಾತ್ರ ಪತ್ರಿಕೆಗಳದಾಗಿತ್ತು. ಆದರೆ ಸ್ವಾತಂತ್ರ್ಯದ ನಂತರ ಹೋರಾಡುವ, ಬ್ರಿಟಿಷ್ ವಿರೋಧಿ, ರಾಷ್ಟ್ರೀಯವಾದಿ ಪತ್ರಿಕೆಗಳು ಒಟ್ಟಾರೆ ಸರ್ಕಾರದ ಪರ ಬೆಂಬಲಿಸುವ ನಿಲುವು ತಾಳಿದ್ದವು. ಅದೂ ವಿಶೇಷವಾಗಿ ವಿದೇಶಾಂಗ ವ್ಯವಹಾರಗಳಿಗೆ ಸಂಬಂಧಿಸಿದಂತೆ 'ರಾಷ್ಟ್ರೀಯ ಹಿತ' ಪ್ರತಿನಿಧಿಸುತ್ತದೆ ಎಂಬಂತಹ ಅಂಗೀಕಾರವೂ ಇತ್ತು.

ಆದರೆ 1975ರಲ್ಲಿ ಪತ್ರಿಕಾ ಸೆನ್ಸಾರ್‌ಶಿಪ್ ಸೇರಿದಂತೆ ಆಂತರಿಕ ತುರ್ತುಪರಿಸ್ಥಿತಿ ನಿರ್ಬಂಧಗಳ ಹೇರಿಕೆಯಿಂದ ಚಿತ್ರ ಬದಲಾಯಿತು. ತುರ್ತುಪರಿಸ್ಥಿತಿಯ ಅನುಭವ ಹೊಸ ಬಗೆಯ ಪತ್ರಿಕೋದ್ಯಮಕ್ಕೆ ನಾಂದಿಯಾಯಿತು. ಚುರುಕಾದ, ತನಿಖಾ ಶೈಲಿಯ ಸುದ್ದಿ ಸಂಗ್ರಹ ಹಾಗೂ ಬರವಣಿಗೆ ಪ್ರಾಧಾನ್ಯ ಪಡೆಯಿತು. ಮಾನವ ಹಕ್ಕುಗಳ ವಿಚಾರಗಳು ಹಾಗೂ ದುರ್ಬಲ ಸಾಮಾಜಿಕ ಗುಂಪುಗಳ ಪರಿಸ್ಥಿತಿಗಳಿಗೂ ಪತ್ರಿಕೆಗಳು ದನಿ ನೀಡಿದವು. ಮಹಿಳೆಯ ದಮನ ಹಾಗೂ ವಿಮೋಚನೆಯ ಅಗತ್ಯದ ಬಗ್ಗೆಯೂ ಜಾಗತಿಕ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಅರಿವು ಹೆಚ್ಚಿದ ಸಂದರ್ಭ ಇದು. ತುರ್ತುಪರಿಸ್ಥಿತಿಯ ನಂತರ ರಾಷ್ಟ್ರದಾದ್ಯಂತ ಮಹಿಳಾ ಗುಂಪುಗಳಿಂದ ಮಹಿಳಾ ಹಕ್ಕುಗಳಿಗಾಗಿ, ಕಾನೂನು ಬದಲಾವಣೆಗಳಿಗಾಗಿ ಹೋರಾಟ, ವರದಕ್ಷಿಣೆ ಕಾನೂನು ಬದಲಾವಣೆಗೆ ಒತ್ತಾಯಿಸಿ ಬಲವಾದ ಹೋರಾಟವೇ ನಡೆಯಿತು. ಆಗ ಈ ಎಲ್ಲಾ ಹೋರಾಟಗಳು, ಪ್ರಚಾರಾಂದೋಲನಗಳು ಮುಖ್ಯವಾಹಿನಿಯ ಪತ್ರಿಕೆಗಳಲ್ಲಿ ಸಾಕಷ್ಟು ಕವರೇಜ್ ಪಡೆದು ಕೊಂಡಿದ್ದವು.

**ಮಹಿಳಾ ವರ್ಷದ ನಂತರ....**

1975ರಲ್ಲಿ ವಿಶ್ವಸಂಸ್ಥೆಯಿಂದ ಮಹಿಳಾ ವರ್ಷ ಘೋಷಣೆಯ ನಂತರ ಹಲವು ಮಹಿಳೆಯರು ಪ್ರಗತಿಪರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡದ್ದು ಕಂಡು ಬರುತ್ತದೆ. ವಿಚಾರಧಾರೆಗಳ ಅಭಿವ್ಯಕ್ತಿಗೆ, ಪ್ರತಿಪಾದನೆಗೆ ಹಲವು ಪತ್ರಿಕೆಗಳೂ ಈ ಸಂದರ್ಭದಲ್ಲಿ ಪ್ರಕಟಣೆ ಆರಂಭಿಸಿದವು.


ಕಲ್ಯಾಣಮ್ಮ

ಎಡಪಂಥೀಯ ವಿಚಾರಧಾರೆಗಳಿಗೆ ಧ್ವನಿಯಾಗಿ ಸಮುದಾಯ ತಂಡ ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ರೂಪು ತಳೆಯಿತು. ರಾಜ್ಯಾದ್ಯಂತ ನಾಟಕಗಳೇ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾ ಸಾಂಸ್ಕೃತಿಕ ಆಂದೋಲನವಾಗಿ ಅದು ರೂಪು ತಳೆಯಿತು. ಈ ಚಟುವಟಿಕೆಗಳ ದಾಖಲೆಗಾಗಿ 'ಸಮುದಾಯ ವಾರ್ತಾಪತ್ರ' 1978ರಲ್ಲಿ ಸೈಕ್ಲೊಸ್ಟೈಲ್ ರೂಪದಲ್ಲಿ ಆರಂಭವಾದಾಗ ರಂಗನಿರ್ದೇಶಕ ಪ್ರಸನ್ನ ಸಂಪಾದಕರಾಗಿದ್ದರು. 1979ರಲ್ಲಿ ಅದು ಮುದ್ರಣರೂಪದಲ್ಲಿ ಪ್ರಕಟವಾದಾಗ ಎಸ್. ಮಾಲತಿ ಅದರ ಸಂಪಾದಕರಾಗಿದ್ದರು. ಹೆಚ್ಚಿದ ಖರ್ಚು ಆದರೆ ಹೆಚ್ಚದ ಚಂದಾದಾರರಿಂದಾಗಿ 1985ರ ನಂತರ ಈ ಪತ್ರಿಕೆ ನಿಂತುಹೋಯಿತು.

ಮೈಸೂರಿನ ಮಹಿಳಾ ಸಂಘಟನೆ 'ಸಮತಾ' ವೇದಿಕೆಯ ವತಿಯಿಂದ 'ಸಮತಾ'–1979ರಲ್ಲಿ ಆರಂಭವಾಯಿತು. ಮಹಿಳಾ ಸಮಸ್ಯೆಗಳ ವಿವಿಧ ಮಗ್ಗುಲುಗಳನ್ನು ಚರ್ಚಿಸುವ ಈ ಪತ್ರಿಕೆ ಮಹಿಳೆಯರಿಂದ ಮಹಿಳೆಯರಿಗಾಗಿ ಪ್ರಕಟವಾಗುತ್ತಿದ್ದ ಪತ್ರಿಕೆ. ಅನಿಯತಕಾಲಿಕವಾಗಿ ಏಳು ಸಂಚಿಕೆಗಳು ವಿಭಿನ್ನ ಸಂದರ್ಭಗಳಲ್ಲಿ ಬಂದಿವೆ.

ಬೆಂಗಳೂರಿನ ವಿಮೋಚನಾ ಸಂಘಟನೆ 1980ರಲ್ಲಿ 'ವಿಮೋಚನಾ ವಾರ್ತಾಪತ್ರ' ದ್ವೈಮಾಸಿಕವನ್ನು ಆರಂಭಿಸಿತು. 1986ರವರೆಗೆ ನಿಯಮಿತವಾಗಿ ಪ್ರಕಟವಾಗುತ್ತಿದ್ದ ಈ ಪತ್ರಿಕೆ ನಂತರ ನಾಲ್ಕು ವರ್ಷ ಪ್ರಕಟವಾಗಲಿಲ್ಲ. 1990ರಲ್ಲಿ ಪುನರಾರಂಭವಾದರೂ ನಿಯಮಿತವಾಗಿಲ್ಲ.

1985ರಲ್ಲಿ 'ಪ್ರಿಯ ಸಂಗಾತಿ' ಎಂದು ಆರಂಭವಾಗಿ ನಂತರ ಹೆಸರು ಬದಲಿಸಿಕೊಂಡ 'ಅಚಲ' ಪತ್ರಿಕೆ ದ್ವೈಮಾಸಿಕವಾಗಿ ನಿಯಮಿತವಾಗಿ ಪ್ರಕಟವಾಗುತ್ತಿತ್ತು. ಅದೂ ಈಗ 2007ರಲ್ಲಿ ಪ್ರಕಟಣೆಯನ್ನು ನಿಲ್ಲಿಸಿದೆ.

1986ರಲ್ಲಿ ವಿಮೋಚನಾ ವಾರ್ತಾಪತ್ರ ಸಂಪಾದಕ ಮಂಡಲಿಯಿಂದ ಹೊರಬಂದ ಗುಂಪು 'ಮಾನವಿ' ದ್ವೈಮಾಸಿಕ ಪತ್ರಿಕೆಯನ್ನು ಆರಂಭಿಸಿತು. ಅದು ನಂತರ 'ಮಾನಸ' ತಿಂಗಳ ಪತ್ರಿಕೆ ಎಂದಾಯಿತು. ಈಗ ಇದೇ ಪತ್ರಿಕೆ 'ನಮ್ಮ ಮಾನಸ' ಹೆಸರಲ್ಲಿ ನಿಯಮಿತವಾಗಿ ಮತ್ತೆ ಪ್ರಕಟಣೆ ಆರಂಭಿಸಿದೆ.

2001ರ ಏಪ್ರಿಲ್‌ನಿಂದ ಲೇಖಕಿ ಬಿ.ಎಸ್. ವೆಂಕಟಲಕ್ಷ್ಮಿ ಅವರು 'ಚರ್ಚೆಗೊಂದು ಚಾವಡಿ' ಎಂಬ ವಿನೂತನ ಪ್ರಯೋಗವೊಂದನ್ನು ಆರಂಭಿಸಿದರು. ನಾಲ್ಕರಿಂದ ಆರು ಪುಟದ ಪುಟ್ಟ ಪತ್ರಿಕೆ ಪ್ರಕಟಣೆಯ ಸಂಪೂರ್ಣ ಖರ್ಚು ತಾವೇ ಭರಿಸಿ ಆಸಕ್ತರಿಗೆ ಉಚಿತವಾಗಿ ಕಳಿಸಿದರು. ಬಹುಪಾಲು ಪತ್ರಿಕೆಯ ಪುಟಗಳನ್ನು ಸಂಪಾದಕಿ ತಾವೇ ಬರೆದರು. ಮರೆತುಹೋದ ಹಿರಿಯ ಲೇಖಕ, ಕಲಾವಿದರನ್ನು ನೆನಪಿಸಿಕೊಳ್ಳುವ ಆಪ್ತಬರಹ, ಕವನ, ಪ್ರತಿಕ್ರಿಯೆಗಳು ಈ ವಿನೂತನ ಏಕವ್ಯಕ್ತಿ ಪ್ರಯೋಗದಲ್ಲಿ ದನಿ ಪಡೆದವು. ವೆಂಕಟಲಕ್ಷ್ಮಿ ಅವರ ಹಟಾತ್ ನಿಧನದಿಂದ ಪತ್ರಿಕೆ ನಿಂತು ಹೋಯಿತು. (2010)

**ಮಹಿಳಾ ಪುರವಣಿಗಳು**

ಎಲ್ಲಾ ಮುಖ್ಯವಾಹಿನಿ ಪತ್ರಿಕೆಗಳೂ ಇತ್ತೀಚಿನ ದಿನಗಳಲ್ಲಿ ಮಹಿಳಾ ಪುರವಣಿಗಳನ್ನು ತರುತ್ತಿವೆ. 1947ರಿಂದ 52ರ ವರೆಗೆ ಮುಂಬೈನ ಸಿ.ವಿ. ರಾಮಚಂದ್ರರಾಯರು, ಕೋಟ ಕಸ್ತೂರಿ, ರಾಮಚಂದ್ರ ಉಚ್ಚಿಲ ಮುಂತಾದವರನ್ನೊಳಗೊಂಡ 'ನುಡಿಕೂಟ' ಹೊರತರುತ್ತಿದ್ದ ವಾರಪತ್ರಿಕೆ 'ನುಡಿ'ಯಲ್ಲೂ ಪ್ರತ್ಯೇಕ ಮಹಿಳಾ ಪುಟ ಇತ್ತು. ಈ ಪತ್ರಿಕೆಗೆ ಹರಿತವಾದ ರಾಜಕೀಯ ಲೇಖನ, ಸಂಪಾದಕೀಯಗಳನ್ನು ಸುಪ್ರಸಿದ್ಧ ಕಾದಂಬರಿಕಾರ ವ್ಯಾಸರಾಯ ಬಲ್ಲಾಳರು ಬರೆಯುತ್ತಿದ್ದರು. ಕರ್ನಾಟಕ ಏಕೀಕರಣವನ್ನು ಬಲವಾಗಿ ಪ್ರತಿಪಾದಿಸಿದ್ದ ಈ ಪತ್ರಿಕೆಯ ಸಂಪಾದಕ ವರ್ಗದಲ್ಲಿ ಎಂ.ವಿ. ಕಾಮತ್, ಹೊಸಬೆಟ್ಟು ಸೋಮನಾಥ ಹಾಗೂ ಶ್ರೀನಿವಾಸ ಹಾವನೂರರಿದ್ದರು. ಪತ್ರಿಕೆಗೆ ಮೊದಲಿನಿಂದಲೂ ಹಣದ ಸಮಸ್ಯೆ ಇತ್ತು. ನುಡಿಕೂಟದವರೇ ಕೈಯಿಂದ ಅಷ್ಟಿಷ್ಟು ಹಾಕುತ್ತಲೇ ಇದ್ದರು. ಸಹಕಾರಿ ಬ್ಯಾಂಕಿಗೆ ಸಾಲಕ್ಕಾಗಿ ಅರ್ಜಿ ಹಾಕುವ ಯತ್ನವೂ ನಡೆದಿತ್ತು.



ಸರೋಜಿನಿ ಮಹಿಷಿ



ಸರಸ್ವತಿಬಾಯಿ ರಾಜವಾಡೆ (ಗಿರಿಬಾ

ಆದರೆ ಎಷ್ಟು ದಿನ ಹೀಗೇ ನಡೆಯಬೇಕು? ಪತ್ರಿಕಾ ಪ್ರಸರಣ ಹೆಚ್ಚಿಸುವುದೊಂದೇ ದಾರಿ. ಅದಾಗಬೇಕಾದರೆ, ಜನಸಾಮಾನ್ಯರಿಗೆ ಹಿಡಿಸುವ ಲೇಖನಗಳಿಗೆ ಹೆಚ್ಚು ಇಂಬುಗೊಡಬೇಕು. ಪುಟಗಳನ್ನು ಹೆಚ್ಚಿಸಿ, ಮಹಿಳಾ ಪುಟ, ವಾಚಕರ ಪ್ರಶ್ನೆ–ಉತ್ತರ, ಮುಖ್ಯವಾಗಿ ಒಂದು ಧಾರಾವಾಹಿ ಕಾದಂಬರಿ ಇವುಗಳನ್ನು ತರಬೇಕೆಂದು ಕೂಟದ ಪ್ರಮುಖರು ನಿರ್ಧರಿಸಿದರು. ('ಕನ್ನಡ ಪತ್ರಿಕಾ ಸೂಚಿ' ಪುಟ 180) ಆಗ ಮಹಿಳಾ ಪುಟದ ಜವಾಬ್ದಾರಿ ಹೊತ್ತಿದ್ದವರು ಶ್ರೀನಿವಾಸ ಹಾವನೂರ ಅವರು.

ಇತ್ತೀಚಿನ ಪತ್ರಿಕೆಗಳಲ್ಲಿ ಮಹಿಳಾ ಪುರವಣಿಯಾಗಿ 'ಮಹಿಳಾ ಸಂಪದ' ಪ್ರಾರಂಭಿಸಿದ ಪ್ರಥಮ ಪತ್ರಿಕೆ ಎಂಬ ಹೆಗ್ಗಳಿಕೆ ಉದಯವಾಣಿ ಪತ್ರಿಕೆಯದ್ದು. ಆದರೆ ನಾಲ್ಕು ಪುಟಗಳ ಈ ಪುರವಣಿಯಲ್ಲಿ ಈಗ ಪುರುಷ ಸಂಪದವೂ ಸೇರಿಕೊಂಡಿದೆ!

**ಮುಖ್ಯವಾಹಿನಿ ಪತ್ರಿಕೆಗಳು:**

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರ ಮಹಿಳೆಯರ ಸಂಪಾದಕತ್ವದಲ್ಲಿ ಹಾಗೂ ಮಹಿಳೆಯರ ಕುರಿತು ಪ್ರಕಟವಾಗುತ್ತಿದ್ದ ಪತ್ರಿಕೆಗಳ ಪಟ್ಟಿ:

**ಬೆಂಗಳೂರು**

**ಜ್ಞಾನಾಂಜನ** (ಮಾಸಿಕ)–ಸಾಹಿತ್ಯ ಸಮ್ಮಿಶ್ರ ಪತ್ರಿಕೆ: 1908–47; ಪ್ರ: ಆನಂದ ಚಂದ್ರಿಕೆ ಕಾರ್ಯಾಲಯ, ಬೆಂಗಳೂರು. ಈ ಪತ್ರಿಕೆಯಲ್ಲಿ 'ಮಹಿಳಾ ಮನೋರಂಜನಿ' ಎಂಬ ವಿಶೇಷ ಅಂಕಣವಿತ್ತು.

**ಸರಸ್ವತಿ–ಮಾಸಪತ್ರಿಕೆ** : 1921; ಸಂ.: ಆರ್. ಕಲ್ಯಾಣಮ್ಮ, ಬೆಂಗಳೂರಿನ ಪತ್ರಿಕೋದ್ಯಮದ ಮೊದಲ ಮಹಿಳೆಯ ಯಶಸ್ವಿ ಪತ್ರಿಕೆ.

**ಶಿಶುವಿಹಾರ–1943** – ಕೆ.ಟಿ. ಬನಶಂಕರಮ್ಮ

**ಸೋದರಿ–ವಾರಪತ್ರಿಕೆ**; ಮಹಿಳಾ ಪ್ರಗತಿ; 1950 ಸಂ: ಎಂ.ಆರ್. ಲಕ್ಷ್ಮಮ್ಮ, ಏಳು ವರ್ಷಗಳ ನಂತರ ಮಾಸಪತ್ರಿಕೆಯಾಗಿ ಪರಿವರ್ತನೆ, ಆರ್ಥಿಕ ಕಾರಣಗಳಿಂದ ಸ್ಥಗಿತ.

**ಮಕ್ಕಳ ಬಾವುಟ–ಮಾಸಪತ್ರಿಕೆ**; 1953; ಸಂ: ಆರ್. ಕಲ್ಯಾಣಮ್ಮ, ಬನಶಂಕರಮ್ಮ.

**ಸಮಾಜ ಕಲ್ಯಾಣ–ಮಾಸಪತ್ರಿಕೆ**; 1957; ಸಂ: ಸಿ. ಶಾರದಾ; ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಲಿ ಪ್ರಕಟಣೆ.


ಬಿ.ಎಸ್.ವೆಂಕಟಲಕ್ಷ್ಮಿ

**ಗಣಿತ ಕೌಮುದಿ**–ಪಾಕ್ಷಿಕ; 1968; ಸಂ: ಎಂ. ರಾಜೇಶ್ವರಿ; ಗಣಿತ ವಿಷಯಕ್ಕಾಗಿ ಮೀಸಲಾದ ಪ್ರಥಮ ಪತ್ರಿಕೆ, ಪಿಯುಸಿವರೆಗಿನ ಅನುದಾನಿತ ಶಾಲಾ ಕಾಲೇಜುಗಳು ತರಿಸಿಕೊಳ್ಳಲು ವಿದ್ಯಾ ಇಲಾಖೆ ಅನುಮತಿ ನೀಡಿತ್ತು.

**ತಾರಾ**–ಮಾಸಪತ್ರಿಕೆ; ಚಲನಚಿತ್ರ / 1968; ಸಂ: ಬಿ.ಎಸ್. ಸಾವಿತ್ರಿದೇವಿ.

**ಕನಕ**–ವಾರಪತ್ರಿಕೆ; 1970; ಸಂ: ಶಶಿಕಲಾ ಎನ್. ತುಂಟಾಪುರ

**ಚಿತ್ರಜ್ಯೋತಿ**–ವಾರಪತ್ರಿಕೆ; ಚಲನಚಿತ್ರ/1970; ಸಂ: ಎನ್. ಸಾವಿತ್ರಿ

**ಕಲ್ಯಾಣ ಕಿರಣ**–ಮಾಸಪತ್ರಿಕೆ; ಧಾರ್ಮಿಕ/1970–77; ಸಂ: ಮಾತೆ ಮಹಾದೇವಿ, ಮೊದಲು ಧಾರವಾಡ ನಂತರ ಬೆಂಗಳೂರಿನಿಂದ ಪ್ರಕಟಣೆ.

**ಚಂದ್ರಚಕೋರಿ**–ಮಾಸಿಕ; 1972–79; ಸಂ: ಕೆ.ಜಿ. ರಾಜಮ್ಮ ಗುರುರಾಜ್; ಕಲೆ, ಚಲನಚಿತ್ರಕ್ಕೆ ಮೀಸಲಾದ ಪತ್ರಿಕೆ.

**ಮಹಿಳಾವಾಣಿ**–ಮಾಸಿಕ/1972; ಸಂ: ವಿ. ಸತ್ಯನಾರಾಯಣ ರಾವ್

**ಗಿರಿದರ್ಶಿನಿ**–ಪಾಕ್ಷಿಕ; 1974–77; ಸಂ: ಕು. ಜಯಂತಿ

**ಮಹಿಳಾ ವಾಣಿ**–ಮಾಸಿಕ / 1974; ಸಂ: ವಿ. ಸತ್ಯನಾರಾಯಣರಾವ್

**ಅಭಿನೇತ್ರಿ**–ಪಕ್ಷ ಪತ್ರಿಕೆ; 1975–78; ಸಂ: ಎಚ್.ಆರ್. ಜಯಲಕ್ಷ್ಮಿ

**ಒಂಟಿ ದನಿ**–ಪಾಕ್ಷಿಕ / ಚಲನಚಿತ್ರ / 1975; ಸಂ: ಆರ್. ನಾಗರತ್ನ

**ಕ್ರಾಂತಿ**–ಪಾಕ್ಷಿಕ; 1975; ಸಂ: ಪಾರ್ವತಮ್ಮ ಸ್ವಾಮಿ.

**ಜಿಲ್ಲಾವಾಹಿನಿ**–ವಾರಪತ್ರಿಕೆ; 1975; ಸಂ: ಎಚ್.ಬಿ. ಸೌಭಾಗ್ಯದೇವಿ

**ಶ್ರೀಪಾದ**–ಪಾಕ್ಷಿಕ; 1975–77; ಸಂ: ಎ.ಆರ್. ಇಂದಿರಮ್ಮ

**ಸಿನೆರಮಾ**–ವಾರಪತ್ರಿಕೆ; ಚಲನಚಿತ್ರ; 1975; ಸಂ: ಇ.ಎನ್. ಮೀರಾ

**ಸೆನ್ಸಾರ್**–ಕನ್ನಡ/ಇಂಗ್ಲಿಷ್; ಪಾಕ್ಷಿಕ; ಕಾರ್ಮಿಕ/1975; ಸಂ: ಆರ್. ಜಯಲಕ್ಷ್ಮಮ್ಮ

**ಅನುರಾಧ**–ಮಾಸಪತ್ರಿಕೆ / 1977; ಸಂ: ಎಲ್.ಎಸ್. ಪಂಕಜಮ್ಮ

**ಮಂಗಳೆ**–ಪಾಕ್ಷಿಕ; 1977; ಎಸ್.ಆರ್.ಎಸ್. ಅಯ್ಯಂಗಾರ್

**ಮಹಿಳಾಭ್ಯುದಯ**–ಪಾಕ್ಷಿಕ; 1977; ಸಂ: ಜಿ.ಆರ್. ಮುರಾರಿರಾವ್

**ಮಿರರ್ ಆಫ್ ಕರ್ನಾಟಕ**–ಮಾಸಪತ್ರಿಕೆ; 1977; ಸಂ: ಜಿ. ಸುಜಾತ

**ಲೇಡೀಸ್ ವಾಯ್ಸ್**–ಪಾಕ್ಷಿಕ; 1977; ಸಂ; ಎಂ.ಆರ್. ಶಾರದಮ್ಮ

**ಆದರ್ಶರಾಷ್ಟ್ರ**–ಮಾಸಿಕ; 1978; ಸಂ: ಆರ್. ಕಮಲ

**ಕಲಾವತಿ**–ಮಾಸಿಕ; 1978; ಸಂ: ಜಯಮ್ಮ

**ಕಾರ್ಯತಂತ್ರ**–ಮಾಸಿಕ; 1978; ಸಂ: ಕೆ. ತುಳಸಮ್ಮ

**ಕಾಲ ಸೂಚಿ**–ಮಾಸಿಕ; 1978; ಸಂ: ಆರ್. ಅಶ್ವತ್ಥಮ್ಮ

**ಕೋಮಲವಲ್ಲಿ**–ಮಾಸಿಕ; 1978; ಸಂ: ಟಿ.ವಿ. ಭಾನುಮತಿ

**ಪೌರ ಜೀವನ**–ಮಾಸಿಕ; 1978; ಸಂ: ಉಮಾದೇವಮ್ಮ ಪರಮಶಿವಯ್ಯ

**ಮೌಲ್ಯಮಾಪನ**–ಕನ್ನಡ/ಇಂಗ್ಲಿಷ್: ತ್ರೈಮಾಸಿಕ; 1978; ಸಂ: ಆರ್. ನಳಿನಿದೇವಿ, ಕೆ.ವಿ. ನಾರಾಯಣನ್; ಪ್ರ: ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯ ಪ್ರಕಟಣೆ.

**ವಂಶಜ್ಯೋತಿ**–ಮಾಸಿಕ; 1978; ಸಂ: ಕೆ.ಎನ್. ಸುಕನ್ಯಾ

**ವರ್ತಮಾನ**–ಮಾಸಿಕ; 1978; ಸಂ: ಟಿ. ನಾಗರತ್ನಮ್ಮ

**ಆಲೋಕ ಅಂಕಣ**–ತ್ರೈಮಾಸಿಕ; 1979; ಸಂ: ಎ.ಆರ್. ನಿರುಪಮಾ ಎರಡನೇ ಸಂಚಿಕೆ 'ಅಂಕಣ' ಎಂದು ಬದಲಾಯಿತು. ಆಗ ಸಂ: ಶ್ರೀನಿವಾಸರಾಜು.

**ಲೋಹಿತ**–ವಾರಪತ್ರಿಕೆ; 1979; ಸಂ: ಕೆ.ಎಸ್. ನಾಗರತ್ನ

**ಕರ್ನಾಟಕ ಪ್ರೇಮಜ್ಯೋತಿ**–ವಾರಪತ್ರಿಕೆ; 1980; ಸಂ: ಡಾ. ಜ್ಯೋತಿ ಮೃತ್ಯುಂಜಯ

**ಪ್ರೇಮಜ್ಯೋತಿ**–ವಾರಪತ್ರಿಕೆ; 1980; ಸಂ: ಜ್ಯೋತಿ ಮೃತ್ಯುಂಜಯ

**ಲಂಕೇಶ್ ಪತ್ರಿಕೆ**–ವಾರಪತ್ರಿಕೆ/ರಾಜಕೀಯ; 1980; ಸಂ: ಪಿ. ಲಂಕೇಶ್, ಗೌರಿಲಂಕೇಶ್, ಇಂದ್ರಜಿತ್

**ಗೆಳತಿ**–ಪಾಕ್ಷಿಕ; 1981; ಆರಂಭದ ಸಂಪಾದಕಿ; ಉಷಾ ನವರತ್ನರಾಂ (ಬಾಪ್ಕೊ ಪ್ರಕಾಶನದ ಪ್ರಕಟಣೆ)

**ದೀನಲೋಕ**–ವಾರಪತ್ರಿಕೆ; 1981; ಸಂ: ಅನಂತಲಕ್ಷ್ಮಿ

**ಲವಕುಶ**–ಮಾಸಿಕ; 1981; ಸಂ: ಪಾರ್ವತಿ ಕೋದಂಡರಾಂ; ಪ್ರ: ಪುನರ್ಜನ್ಮ ಸಂಶೋಧನಾ ಕೇಂದ್ರ

**ಹಣಗೆ**–.... ; 1993; ಸಂ: ಪ್ರೇಮಾ ಭಟ್

**ಉದಯವಾಣಿ**–ದೈನಿಕ/ಸುದ್ದಿ; 1994; ಸ್ಥಾನಿಕ ಸಂಪಾದಕರು: ಈಶ್ವರ ದೈತೋಟ, ಡಾ. ಆರ್. ಪೂರ್ಣಿಮಾ ಮಣಿಪಾಲದಲ್ಲಿ 1965ರಲ್ಲಿ ಆರಂಭವಾದ ಉದಯವಾಣಿ ದೈನಿಕದ ಬೆಂಗಳೂರು ಆವೃತ್ತಿ 1994ರಲ್ಲಿ ಆರಂಭವಾಯಿತು.

**ಚರ್ಚೆಗೊಂದು ಚಾವಡಿ**–ಮಾಸಿಕ; ಸಂ: ಬಿ.ಎಸ್. ವೆಂಕಟಲಕ್ಷ್ಮಿ

**ವಿಮೋಚನಾ– ಅಚಲಾ– ಮಾನಸ–**

ಗ್ರಂಥಋಣ:


1. **ನಂಜನಗೂಡು ತಿರುಮಲಾಂಬಾ**–ಜಿ.ನ.ಮಂಗಳಾ; ಕನ್ನಡ ಪತ್ರಿಕಾ ಲೋಕದ ಧೀಮಂತರು–1–2; ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು.
2. **ಕನ್ನಡ ಪತ್ರಿಕಾ ಸೂಚಿ** (1843–1972)–ಸಂಪಾದಕರು: ಡಾ. ಶ್ರೀನಿವಾಸ ಹಾವನೂರ, ಸಂಕಲನಕಾರರು: ಮೋಹನ ಗ. ಹೆಗಡೆ, ಪಂಡಾರಿ ಚೆಲ್ಲಪ್ಪನ್. ಪ್ರ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 2004.
3. **ವಿಚಯ** (ಕನ್ನಡ ಸಾಹಿತ್ಯದ ಒಂದು ಸ್ತ್ರೀವಾದಿ ಅಧ್ಯಯನ); ಡಾ. ಬಿ.ಎನ್. ಸುಮಿತ್ರಾಬಾಯಿ, ಇಳಾ ಪ್ರಕಾಶನ, ಬೆಂಗಳೂರು; 1995.
4. **ಮಹಿಳೆ ಸಾಹಿತ್ಯ ಸಮಾಜ**; ವಿಜಯಾ ದಬ್ಬೆ; ರಚನಾ ಪ್ರಕಾಶನ, ಮೈಸೂರು–23; 1989.
5. **ಪ್ರಜ್ಞಾ**(ಹೆಣ್ಣುಮಗು ಮತ್ತು ಸ್ತ್ರೀ ಸಂವೇದನೆ ಕುರಿತ ಲೇಖನಗಳು); ಸಿ.ಜಿ. ಮಂಜುಳಾ, ನೆಲಮನೆ ಪ್ರಕಾಶನ, ಮೈಸೂರು.
6. **ಬೆಂಗಳೂರು ದರ್ಶನ**, ಸಂಪುಟ 1; ಪ್ರಧಾನ ಸಂಪಾದಕರು: ಪ್ರೊ. ಎಲ್.ಎಸ್. ಶೇಷಗಿರಿರಾವ್, ಉದಯಭಾನು ಕಲಾ ಸಂಘ, ಬೆಂಗಳೂರು; 2005.


●




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*

*(ಹಿಂದಿನ ಸಂಚಿಕೆಯಿಂದ)*

ಮೆಟ್ರಿಕ್ ನಂತರ ಕಾಲೇಜ್ ಸೇರಿದೆ. ದೊರೆತ ಒಂದೆರಡು ಅಲ್ಪಾವಧಿ ಕೆಲಸಗಳನ್ನೂ ಮಾಡಿದೆ. ನಂತರ, ನಾನು ಮುಂಬಯಿಯಲ್ಲಿದ್ದ ಅಣ್ಣನ ಬಳಿಗೆ ಹೋದೆ.

ವಿಷಯ ತಿಳಿದ ಹರಿಶ್ಚಂದ್ರ ಅಲ್ಲಿಗೇ ಬಂದ. ದೃಢ ನಿರ್ಧಾರ ಮಾಡಿ ನನ್ನನ್ನು ಮದುವೆಯಾಗುವ ವಿಷಯವನ್ನು ನೇರವಾಗಿ ಮಾತಾಡಿದ. ಹಿರಿಯರನ್ನು ಕರೆತರುವುದಾಗಿ ಹೇಳಿದ. ಅಣ್ಣ ನನ್ನ ಕಡೆ ನೋಡಿದ. ನಾನು 'ಒಪ್ಪದಿದ್ದರೆ ಪ್ರಾಣ ಬಿಡುವೆ' ಎಂಬರ್ಥದ ನೋಟ ಬೀರಿದೆ.

ಅಣ್ಣನಿಗೆ ಬೇರೆ ದಾರಿಯಿರಲಿಲ್ಲ. ಹಿರಿಯರೊಂದಿಗೆ ಊರಿಗೆ ಬಂದು ಮಾತಾಡಲು ಹರಿಶ್ಚಂದ್ರನಿಗೆ ತಿಳಿಸಿದ. ಅದರಂತೆ ಹರಿಶ್ಚಂದ್ರ ತನ್ನ ಹಿರಿಯರೊಂದಿಗೆ ಬಂದ; ಮದುವೆಯ ವಿಷಯ ಮಾತಾಯಿತು. ಅಮ್ಮ ಅನಿವಾರ್ಯವಾಗಿ ಒಪ್ಪಿದಳು.

ಮದುವೆ ಖರೀದಿ ಹೆಚ್ಚಿಗೆಯೇನೂ ಇರಲಿಲ್ಲ. ಹರಿಶ್ಚಂದ್ರನಿಗೆ ಏನಾದರೂ ಕೊಡಿಸಲು ನಾನು ಒಪ್ಪಿರಲಿಲ್ಲ. ಹಾಗೆಯೆ, ನನಗೆ ಏನಾದರೂ ಕೊಡಿಸಲು ಅವರು ಒಪ್ಪಿರಲಿಲ್ಲ. ಹಾಗಾಗಿ, ಅವರವರ ಬಟ್ಟೆಗಳನ್ನು ಅವರವರೇ ತಂದುಕೊಳ್ಳಬೇಕಾಗಿತ್ತು. ಅಣ್ಣ ಕೊಟ್ಟ ಹಣದಲ್ಲಿ ನಾನು ಒಂದು ಒಳ್ಳೇ ಸೀರೆ, ಎರಡು ಸಾಧಾರಣ ಸೀರೆ, ಮೂರು-ನಾಲ್ಕು ಜಾಕೀಟ್‌ಗಳಿಗೆ ಬಟ್ಟೆ ಖರೀದಿಸಿದೆ.

ಹರಿಶ್ಚಂದ್ರನ ಕುಟುಂಬದವರು ಬೌದ್ಧಜನಪಂಚಾಯತ್‌ಗೆ ಸದಸ್ಯರಾಗಿರಲಿಲ್ಲ. ಇದು ಆಗಲೇಬೇಕೆಂದು ಅಮ್ಮ ಒತ್ತಾಯಿಸಿದಳು. ಅವರಾದರೂ ಮರುಮಾತಿಲ್ಲದೆ ಸದಸ್ಯರಾದರು.

ಸರಳವಾಗಿ ವಿವಾಹ ಆಹ್ವಾನ ಪತ್ರ ಮಾಡಿಸಿದೆವು. ಕುಲದೇವತೆಯ ಹೆಸರಿನ ಜಾಗದಲ್ಲಿ 'ನಮೋ ಬುದ್ಧಾಯ' ಹಾಕಿಸಿದೆವು. ಆಹ್ವಾನ ಪತ್ರ ಹಂಚುವಾಗ ಕೆಲವು ಗೆಳತಿಯರು, 'ಹುಡುಗ ಯಾವ ಪೈಕಿ?' ಎನ್ನುವ ಪ್ರಶ್ನೆ ಹಾಕಿ, ಹರಿಶ್ಚಂದ್ರನ ಜಾತಿ ತಿಳಿದುಕೊಳ್ಳುವ ಪ್ರಯತ್ನ ಮಾಡಿದರು. ನಮ್ಮ ಮನೆಯಲ್ಲಿ ಬಾಡಿಗೆಗಿದ್ದ ಖೇಡೂಸ್ಕರ್, ಅಣ್ಣ ತನ್ನ ಮಿತ್ರನೆಂಬ ಕಾರಣಕ್ಕೆ ಪ್ರಥಮ ಬಾರಿಗೆ ಬಂದಿದ್ದ. ಹರಿಶ್ಚಂದ್ರನಿಗೆ ನಮ್ಮ ಜಾತಿ ಗೊತ್ತಿರಲಿಲ್ಲ; ನನ್ನ ಬಗ್ಗೆ ಆಸಕ್ತಿ ಮೂಡಿದ ಬಳಿಕವೂ ನಮ್ಮ ಜಾತಿ ಬಗ್ಗೆ ಕೇಳಲಿಲ್ಲ. ನಾವೂ ಅಷ್ಟೇ. ಹರಿಶ್ಚಂದ್ರನನ್ನು ಮೊದಲಾಗಲಿ, ನನ್ನ ಬಗ್ಗೆ ಆಸಕ್ತಿ ವಹಿಸಿದ ಮೇಲಾಗಲಿ ಜಾತಿಯನ್ನು ಕೇಳಿರಲಿಲ್ಲ. 'ನಮ್ಮ ಮನೆಗೆ ಬರುವುದು ಬೇಡ' ಎಂದು ಅಮ್ಮ ಹೇಳಿದಾಗ, ಅವಳಿಗೂ ಹರಿಶ್ಚಂದ್ರನ ಜಾತಿ ತಿಳಿದಿರಲಿಲ್ಲ. ಇದು ವಸ್ತುಸ್ಥಿತಿ. ಇದನ್ನು ಬಿಡಿಸಿ ಹೇಳಹೋಗದೆ, 'ನಾವು ಬೌದ್ಧರಾಗಿದ್ದೇವೆ; ನಮಗೆ ಜಾತಿ-ಕುಲದ ಭೇದವಿಲ್ಲ' ಎಂದು ಹೇಳಿದಾಗ ಗೆಳತಿಯರು ಸುಮ್ಮನಾದರು. ಆದರೆ ಗೆಳತಿಯರಾರೂ ನನ್ನ ಮದುವೆಗೆ ಬರಲಿಲ್ಲ.

ಮದುವೆ ಹರಿಶ್ಚಂದ್ರನ ಊರಲ್ಲಿ ಆಗಲಿತ್ತು. ಸಹ್ಯಾದ್ರಿಯ ತಪ್ಪಲ ಪ್ರಾಂತದ ಆ ಪುಟ್ಟ ಊರು, ಹರಿಶ್ಚಂದ್ರ ಹಿಂದೆ ಹೇಳಿದ್ದಂತೆ, ಸುಂದರ ಪ್ರದೇಶವಾಗಿತ್ತು.

ನಾವು ಊರು ತಲುಪುವ ಹೊತ್ತಿಗೆ ಬಹಳ ಜನ ಕಾದು ನಿಂತಿದ್ದರು. 'ಮದುವೆಯಾದರೆ ಅದೇ ಹುಡುಗಿಯನ್ನು' ಎಂದಿದ್ದ ಹರಿಶ್ಚಂದ್ರನ ಹುಡುಗಿ ಹೇಗಿರಬಹುದು ಎಂದು ಎಲ್ಲರಿಗೂ ಕುತೂಹಲ ಮೂಡಿದಂತಿತ್ತು. ಹರಿಶ್ಚಂದ್ರ ಬಂದವನೇ ನಮ್ಮನ್ನು ಸ್ವಾಗತಿಸಿ ಅಣ್ಣನನ್ನು ಉದ್ದೇಶಿಸಿ "ನಿಮಗೆಲ್ಲ ಇಲ್ಲಿ ಏರ್ಪಾಟಾಗಿದೆ. ಬೇರೆ ಏನಾದರೂ ಬೇಕಾದರೆ ಕೇಳಿ" ಎಂದು ಹೇಳಿದ. ಸ್ವಲ್ಪ ಹೊತ್ತಿನಲ್ಲಿ ತಿಂಡಿ ಬಂತು; ಹಿಂದೆಯೇ ಚಹಾ ಕೂಡ ಬಂತು. ಅದು-ಇದು ಮಾತಾಡುತ್ತಾ ನಾವು ಕಾಲ ಕಳೆದೆವು. ಮಾಡಲು ಏನೂ ಕೆಲಸ ಇರಲಿಲ್ಲ. ಊರು-ಜನ ಹೊಸದು; ಪರಿಚಯದವರಾರೂ ಇರದಿದ್ದರಿಂದ, ಅಲ್ಲಲ್ಲಿ ಸುತ್ತಾಡಲೂ ಆಗಲಿಲ್ಲ. ಹರಿಶ್ಚಂದ್ರ ಅತ್ತಿಂದಿತ್ತ, ಇತ್ತಿಂದತ್ತ ಅವಸರದಲ್ಲಿ ಓಡಾಡುತ್ತಾ, ಅವರಿವರಿಗೆ ಏನೇನೋ ಕೆಲಸ ಹೇಳುತ್ತಿದ್ದುದು ಕಾಣುತ್ತಿತ್ತು.

ಅಷ್ಟರಲ್ಲಿ ಹರಿಶ್ಚಂದ್ರ, ತನ್ನ ತಾಯಿ ಜಯಶ್ರೀಯನ್ನು ಕರೆತಂದ; ಆಕೆ ನಮ್ಮ ಕುಶಲೋಪರಿ ವಿಚಾರಿಸಿದರು. ಒಂಬತ್ತು ಗಜದ ಭರ್ಜರಿ ಸೀರೆ, ಎದ್ದು ಕಾಣುವ ಮೂಗುಬೊಟ್ಟುಗಳಿಂದಾಗಿ ನನ್ನ ಅತ್ತೆ ವಿಶೇಷ ಛಾಪು ಬೀರುವಂತಿದ್ದರು. ಅಲ್ಲಿ ಓಡಾಡುತ್ತಿದ್ದ ಹೆಂಗಸರನ್ನು ಗಮನಿಸಿದಾಗ, ಈ ಭಾಗದ ಹೆಂಗಸರು ತಲೆ ಮೇಲೆ ಕಡ್ಡಾಯವಾಗಿ ಸೆರಗು ಹಾಕುವುದಿಲ್ಲ ಎಂಬುದು ತಿಳಿದು ಬಂತು.

ಅತ್ತೆ, ನನ್ನ ತಾಯಿ ಮತ್ತಿಬ್ಬರು ಹೆಂಗಸರನ್ನು ತಬ್ಬಿಕೊಂಡು ಸ್ವಾಗತಿಸಿದರು. ಹರಿಶ್ಚಂದ್ರ ಇಷ್ಟಪಟ್ಟು ಮದುವೆಯಾಗುತ್ತಿರುವುದನ್ನು ಎತ್ತಿ ಹೇಳಿ, ಸಂತೋಷ ವ್ಯಕ್ತಪಡಿಸಿದರು. ಎಲ್ಲರನ್ನೂ ಆತ್ಮೀಯತೆಯಿಂದ ಊಟಕ್ಕೆ ಕರೆದೊಯ್ದರು.

ಒಂದು ಕಡೆ ಗಂಡಸರು ಆಗಲೇ ಊಟ ಶುರು ಮಾಡಿದ್ದರು. ಹೆಂಗಸರಿಗಾಗಿ ಪ್ರತ್ಯೇಕ ಜಾಗದಲ್ಲಿ ಊಟ ವ್ಯವಸ್ಥೆಯಾಗಿತ್ತು. ನಾವು ಅತ್ತೆಯ ಹಿಂದೆ ಹಿಂದೆ ಹೋಗಿ, ಒಂದು ಪ್ರತ್ಯೇಕವಾದ ಮನೆ ಪ್ರವೇಶಿಸಿದೆವು. ಅಲ್ಲಿ ಅತ್ತೆ ನನಗೆ ನನ್ನ ಅಕ್ಕ ಜಾನಕಿಯನ್ನು (ಹರಿಶ್ಚಂದ್ರನ ಅಣ್ಣನ ಪತ್ನಿಯನ್ನು) ಪರಿಚಯಿಸಿದರು. ಆಕೆ ಮಗುವಿಗೆ ಹಾಲು ಕುಡಿಸುತ್ತಲೇ ಮುಗುಳು ನಗೆ ಬೀರಿ ಸ್ವಾಗತಿಸಿದಳು. ಕುಳಿತುಕೊಳ್ಳಲು ಹಾಸಿಗೆ ಹಾಸಿದಾಕೆ ನನ್ನ ಇನ್ನೊಬ್ಬ ಅಕ್ಕ (ಎರಡನೆಯವಳು). ಈಕೆಯ ಹೆಸರು ವಿಮಲ್. ಈಕೆ ಹರಿಶ್ಚಂದ್ರನ ಎರಡನೇ ಅಣ್ಣನ ಪತ್ನಿ. ಈಕೆಯಂತೂ ನನ್ನನ್ನು ಹೆಚ್ಚು ಆತ್ಮೀಯತೆಯಿಂದ ಕಂಡಳು.

ಮದುವೆಯಾದ ಕೂಡಲೇ ಮಂಟಪದಲ್ಲೇ ವಧುವಿನ ಹೆಸರನ್ನು ಗಂಡನ ಮನೆಯವರು ಬದಲಿಸುವುದು ನಮ್ಮಲ್ಲಿ ಸಾಮಾನ್ಯ. ನನ್ನ ಈ ಅಕ್ಕಂದಿರ ಹೆಸರನ್ನೂ ಬದಲಿಸಲಾಗಿತ್ತು. ನನ್ನ ಹೆಸರನ್ನು ಮಾತ್ರ ಬದಲಿಸಬಾರದೆಂದು ನಾನು ಮೊದಲೇ ಹತ್ತೆಂಟು ಬಾರಿ ಹರಿಶ್ಚಂದ್ರನಿಗೆ ಹೇಳಿದ್ದೆ.



ಊಟಕ್ಕೆ ಸಿದ್ಧತೆಗಳು ನಡೆದಿದ್ದವು. ಹತ್ತಾರು ಹೆಂಗಸರು ಊಟ ಬಡಿಸಲು

ತಯಾರಾಗಿದ್ದರು. ಕೆಲವರು ನಮ್ಮನ್ನೇ ದೃಷ್ಟಿಸಿ ನೋಡುತ್ತಿದ್ದರು. ಒಂದಿಬ್ಬರು ಹತ್ತಿರ ಬಂದು, ನಗು ಮುಖದಿಂದಲೇ ಮಾತಾಡುತ್ತಾ 'ನೀವು ಪಾನ್‌ಮಹಾರರಲ್ಲವೆ?' ಎಂದು ಕೇಳಿದರು. ನನಗೆ ಇದರ ಅರ್ಥ ಗೊತ್ತಿರಲಿಲ್ಲ. ನಾನು ಉತ್ತರಿಸಲು ತಡಬಡಿಸಿದಾಗ, ಅವರು ತಮ್ಮಲ್ಲೇ ಏನೇನೋ ಮಾತಾಡಿಕೊಳ್ಳುತ್ತಾ ಹೋಗಿಬಿಟ್ಟರು. ಆಗ ಅವರ ಮುಖ ತುಸು ಚಿಕ್ಕದಾಗಿತ್ತು ಎಂಬುದನ್ನು ಗಮನಿಸಿದೆ. ಈ ಬಗ್ಗೆ ಆಮೇಲೆ ಹರಿಶ್ಚಂದ್ರನನ್ನು ಕೇಳಿದೆ. ಆಗ ತಿಳಿದು ಬಂದಿದ್ದೇನೆಂದರೆ, ಬೇಲಮಹಾರರು ಶಿವನನ್ನು ಕೇವಲ ಬಿಲ್ವ ಪತ್ರೆಯಿಂದ ಪೂಜಿಸುವವರೆಂದು, ಪಾನ್ ಮಹಾರರು ಯಾವುದೇ ಪತ್ರೆ/ಪುಷ್ಪಗಳಿಂದ ಪೂಜಿಸುವವರೆಂದು ತಿಳಿದು ಬಂತು. ಬೇಲ ಮಹಾರರು ಹಿಂದುಳಿದವರು; ಪಾನ್ ಮಹಾರರು ಮುಂದುವರೆದವರು ಎಂಬ ತಿಳುವಳಿಕೆಯೂ ವ್ಯಾಪಕವಾಗಿತ್ತು. ಈ ಎರಡೂ ಗುಂಪುಗಳ ನಡುವೆ ಊಟ-ಮದುವೆ ಸಂಬಂಧ ಇಲ್ಲವೆಂದು ಗೊತ್ತಾದಾಗ ನನಗೆ ವ್ಯಥೆಯಾಯಿತು. ನಾನು ತಕ್ಷಣ ಉತ್ತರಿಸದಿದ್ದಾಗ, ಆ ಹೆಂಗಸರು ನಾವು ಬೇಲ ಮಹಾರರೆಂದು ತಿಳಿದು, ಮುಖ ಸಣ್ಣದು ಮಾಡಿಕೊಂಡು ಹೋಗಿದ್ದರು ಎಂದು ತಿಳಿದುಬಂತು.

ಊಟದ ನಂತರ ನಾವು ತುಸು ವಿಶ್ರಾಂತಿ ತೆಗೆದುಕೊಂಡೆವು. ಆ ಸಂಜೆಯೇ ನಮ್ಮ ಮದುವೆ. ವಿಶ್ರಾಂತಿಯ ನಂತರ ನಾನು ಡ್ರೆಸ್ ಮಾಡಿಕೊಳ್ಳಲಾರಂಭಿಸಿದೆ. ತಂದಿದ್ದ ಹೊಸ ಬಿಳಿಸೀರೆ ಉಟ್ಟೆ; ಅಮ್ಮ ತೆಗೆದುಕೊಟ್ಟಿದ್ದ ಸರ ಹಾಕಿಕೊಂಡೆ. ಗೆಳತಿಯೊಬ್ಬಳು ನೀಡಿದ್ದ ಪೌಡರ್ ಹಚ್ಚಿಕೊಂಡೆ.

ಅತ್ತ ಮದುವೆ ಮಂಟಪದಲ್ಲಿ ಬುದ್ಧ-ಅಂಬೇಡ್ಕರ್ ಭಾವಚಿತ್ರಗಳನ್ನು ಅಲಂಕರಿಸಿ ಇಡಲಾಗಿತ್ತು. ಬೌದ್ಧ ಭಿಕ್ಕುಗಳು ಆಗಮಿಸಿದ್ದರು. ಬಹುತೇಕ ಜನ ಶುಭ್ರವಾದ ಬಿಳಿ ಬಟ್ಟೆ ಧರಿಸಿದ್ದರು.

ವಧು-ವರರನ್ನು ಮಂಟಪಕ್ಕೆ ಕರೆದಾಗ ನಾನು, ಅಣ್ಣ-ಅಮ್ಮನ ಜೊತೆ ಹೋದೆ. ಅತ್ತಕಡೆಯಿಂದ ಹರಿಶ್ಚಂದ್ರನೂ ಬಂದ. ಭಿಕ್ಕುಗಳು ಹೇಳಿದಾಗ ನಾವು ಬುದ್ಧ, ಅಂಬೇಡ್ಕರ್ ಭಾವಚಿತ್ರಗಳಿಗೆ ಹಾರ ಹಾಕಿದೆವು; ಬಿಡಿ ಹೂಗಳಿಂದ ಪೂಜೆ ಮಾಡಿದೆವು. ನಂತರ ಹಾರ ಬದಲಾಯಿಸಿಕೊಂಡೆವು. ನನಗಾಗಿ ತಂದಿದ್ದ ಉಂಗುರವನ್ನು ಹರಿಶ್ಚಂದ್ರ ತೊಡಿಸಿದ. ನಾನು ಸ್ವರ್ಗಸುಖ ಅನುಭವಿಸಿದೆ. ನನ್ನ ಪ್ರೀತಿಯ ಹರಿಶ್ಚಂದ್ರನನ್ನು ಮದುವೆಯಾಗಿದ್ದೆ.

ಭಿಕ್ಕು ನನ್ನನ್ನು ಕರೆದು ಕೂಗಿದಾಗ, ಸಾವರಿಸಿಕೊಂಡು ಅತ್ತ ತಿರುಗಿದೆ. ಅವರು ವಿವಾಹಪ್ರಮಾಣ ಬೋಧಿಸಿದರು. ನಿಷ್ಠೆಯ, ಸಹಜೀವನದ, ತಾಳ್ಮೆಯ ಪ್ರಮಾಣವನ್ನು ಬೋಧಿಸಿದರು. ಅಲ್ಲಿಗೆ ಬೌದ್ಧವಿಧಿ ಮುಗಿಯಿತು.

ನಂತರ ಬಂಧುಗಳು ಸೇರಿದರು. ವಧುವಿಗೆ ಹೆಸರಿಡುವ ಪ್ರಸ್ತಾಪ ಬಂತು. 'ನಾವು ಇಬ್ಬರೂ ಬೌದ್ಧ ಧರ್ಮದ ಪ್ರಕಾರ ಮದುವೆ ಯಾಗಿರುವುದರಿಂದ, ವಧುವಿನ ಹೆಸರು ಬದಲಾಯಿಸುವ ಪ್ರಶ್ನೆಯೇ ಬರುವುದಿಲ್ಲ' ಎಂದು ಹರಿಶ್ಚಂದ್ರ ಹೇಳಿದಾಗ, ಎಲ್ಲರ ಬಾಯಿ ಕಟ್ಟಿತು. ನಾಲ್ಕಾರು ಕ್ಷಣಗಳ ಬಳಿಕ ಅತ್ತೆ, 'ಹೌದು ಬಿಡ್ರಿ; ಸೊಸೆಯ ಹೆಸರೂ ಚೆನ್ನಾಗಿದೆ ಊರ್ಮಿಲಾ ಅಂತ' ಎಂದು ಪರಿಸ್ಥಿತಿಯನ್ನು ತಿಳಿ ಮಾಡಿದರು.

ಮದುವೆಯಾದ ಮಾರನೇ ದಿನ ನನ್ನ ತವರು ಮನೆಯವರೆಲ್ಲಾ ಊರಿಗೆ ಹೊರಟು ನಿಂತರು. ನಾಕಾರು ದಿನಗಳವರೆಗಾದರೂ ನನ್ನೊಂದಿಗೆ ಉಳಿಯಲು ಯಾರೂ ತಯಾರಿರಲಿಲ್ಲ. ನನಗೆ ಅಳು ಬಂತು. 'ಯಾರೂ ಒಪ್ಪದಿದ್ದರು ಮದುವೆಯಾದದ್ದಕ್ಕೆ ಅನುಭವಿಸು' ಎಂಬರ್ಥದಲ್ಲಿ ನನ್ನನ್ನು ದೂರ ಮಾಡುತ್ತಿದ್ದಾರೇನೊ ಎನಿಸಿತು.

ಐದನೇ ದಿನಕ್ಕೆ ನಾವು ಗಂಡ-ಹೆಂಡತಿ ರತ್ನಾಗಿರಿಗೆ ಹೊರಟೆವು. ರೂಢಿಯಂತೆ ಅಲ್ಲಿ ನಮಗೆ ಒಳ್ಳೇ ಸ್ವಾಗತ ಸಿಗಬೇಕಿತ್ತು. ಆದರೆ ಸಿಗಲಿಲ್ಲ. ನನ್ನ ಅಕ್ಕ ಮಂಜುಳಾಗೆ ಹೆರಿಗೆಯಾಗಿತ್ತು; ಆದರೆ ಅವಳಿಗೆ ಹಾಲು ಬರುತ್ತಿರಲಿಲ್ಲ. ಮಗುವಿಗೆ ಹಾಲು ಕುಡಿಸಲು ಆಗದೇ, ಮಗು ಭಾರೀ ಕಿರುಚುತ್ತಿತ್ತು. ಅಮ್ಮ ಅದರಲ್ಲಿ ಮುಳುಗಿದ್ದಳು. ಅಣ್ಣ-ಅತ್ತಿಗೆ ಮುಂಬಯಿಗೆ ಹೋಗಿಬಿಟ್ಟಿದ್ದರು. ಹಾಗಾಗಿ, ಮದುವೆಯಾಗಿ ಹೊಸದಾಗಿ ಮನೆಗೆ ಬಂದ ಮಗಳು-ಅಳಿಯನನ್ನು ಸರಿಯಾಗಿ ಮಾತಾಡಿಸಲು ಕೂಡ ಅಮ್ಮನಿಗೆ ಆಗಲಿಲ್ಲ.

ಹರಿಶ್ಚಂದ್ರ ರತ್ನಾಗಿರಿಯಲ್ಲಿ ಗೆಳೆಯರ ಮನೆಗೆ ಹೋಗಿ ಬಂದ. ನಾನು ತುಸು ಹೊತ್ತು ಅಕ್ಕನ ಬಳಿ ಕುಳಿತೆ. ಮಧ್ಯಾಹ್ನದ ಅಡುಗೆಗೆ ಏನೋ ಸಾಮಾನು ತರಲು ಅಮ್ಮ ಬ್ಯಾಗ್ ಹಿಡಿದು ಅಂಗಡಿಗೆ ಹೋದಳು.

ಅಕ್ಕನಿಗೆ ನಿದ್ರೆ ಬಂದಿತ್ತು. ರಾತ್ರಿಯೆಲ್ಲಾ ಅತ್ತು, ಈಗ ಮಗು ಕೂಡ ನಿದ್ರೆ ಹೋಗಿತ್ತು. ನಸುಕಿನಲ್ಲೇ ಪ್ರಯಾಣ ಪ್ರಾರಂಭಿಸಿದ್ದರಿಂದ ನನಗೂ ಕಣ್ಣು ಎಳೆಯುತ್ತಿದ್ದವು. ನಾನೂ ಹಾಗೆಯೇ ನಿದ್ರೆ ಹೋದೆ.

ಮಧ್ಯಾಹ್ನ ಎಚ್ಚರವಾಗುವ ಹೊತ್ತಿಗೆ ಹರಿಶ್ಚಂದ್ರ ಬಂದು ಹೊರಗೆ ಕೂತಿದ್ದ. ಅಮ್ಮ ಅಡುಗೆ ಮಾಡಿದ್ದಳು. 'ಅಕ್ಕನನ್ನು ಎಬ್ಬಿಸುವುದು ಬೇಡ; ನೀನು-ನಿನ್ನ ಗಂಡ ಊಟ ಮಾಡಿ' ಎಂದ ಅಮ್ಮ, ರುಚಿಯಿಲ್ಲದ ಮೀನು ಸಾರು ಬಡಿಸಿದಳು. ನಾವು ಗಂಡ-ಹೆಂಡತಿ ಮುಖ ಕಿವುಚಿಕೊಂಡು, ಶಾಸ್ತ್ರಕ್ಕೆ ಊಟ ಮಾಡಿ, ಕೈ ತೊಳೆದೆವು.

ಅರ್ಧ ಗಂಟೆ ಕಳೆದಿರಬಹುದು; ಅಂಗಡಿಯಿಂದ ತಂದಿದ್ದ ಒಣಗಿದ ಮೀನುಗಳ ಪೈಕಿ ಉಳಿದ ನಾಲ್ಕೈದನ್ನು ಹಳೆಯ ಚೀಲದಲ್ಲಿ ಹಾಕಿಕೊಂಡು ಬಂದ ಅಮ್ಮ "ನಿನ್ ಅತ್ತೆಗೆ ಇಂಥ ಮೀನು ಅಂದ್ರೆ ಬಹಳ ಇಷ್ಟವಂತೆ; ಒಯ್ದು ಕೊಡು" ಎಂದು ಹೇಳಿ, ಚೀಲ ಚಾಚಿದಳು. ಮೀನುಗಳ ನೆಪದಲ್ಲಿ ನಮ್ಮನ್ನು ಆ ಕೂಡಲೇ ಅಟ್ಟಿ ಬಿಡುವ ಅಭಿಪ್ರಾಯ ಅಮ್ಮನದೇ? ತನ್ನ ಅಭಿಪ್ರಾಯ ಒಪ್ಪದೇ ಮದುವೆಯಾದಾಕ್ಷಣ ತಾನೇನು ಮಗಳಲ್ಲವೇ? ಪ್ರೀತಿಸಿ ಮದುವೆಯಾಗುವುದು ತಾಯಿಯನ್ನೇ ವೈರಿಯನ್ನಾಗಿಸುತ್ತದೆಯೆ? ಎಂಬ ಪ್ರಶ್ನೆಗಳು ನನ್ನನ್ನು ಮುತ್ತಿದವು.

ಹರಿಶ್ಚಂದ್ರನ ಕಡೆ ನೋಡಿದೆ, ನನ್ನ ದೃಷ್ಟಿ ತಪ್ಪಿಸಿಕೊಳ್ಳಲು ಹೊರಗೆ ನೋಡಿದ. ನಾನು ಅಮ್ಮನಿಂದ ಚೀಲ ತೆಗೆದುಕೊಂಡು, ಬೆಳಿಗ್ಗೆ ಊರಿನಿಂದ ಬರುವಾಗ ತಂದಿದ್ದ ಬ್ಯಾಗ್ ಜೊತೆ ಇಟ್ಟೆ. ಅಕ್ಕ ಏಳುವವರೆಗೆ ಕಾಯುವಂತಿರಲಿಲ್ಲ. ಹಾಗಾಗಿ, ಗಂಡ-ಹೆಂಡತಿ ಹೊರಟೆವು. ಅಮ್ಮ ಬಾಗಿಲವರೆಗೂ ಬರಲಿಲ್ಲ. ಅಡುಗೆ ಮನೆಯಿಂದಲೇ ತಲೆಯಾಡಿಸಿದಳು.

'ಎಂಥವಳು ನಿನ್ನಮ್ಮ; ಮದುವೆಯಾಗಿ ವಾರ ಕಳೆದಿಲ್ಲ; ಮಗಳು-ಅಳಿಯ ಬಂದಿದ್ದಾರೆ; ಎರಡು ದಿನ ಇದ್ದು ಹೋಗಿ ಅಂತ ಉಪಚಾರಕ್ಕಾದರೂ ಹೇಳಲಿಲ್ಲ......' ಎನ್ನುತ್ತಾನೇನೋ ಹರಿಶ್ಚಂದ್ರ ಎಂದು ಭಾವಿಸಿ, ನಾನೇ 'ಅಕ್ಕನ ಚಿಂತೆಯಲ್ಲಿ ಅಮ್ಮ ಮುಳುಗಿ ಹೋಗಿದ್ದಾಳೆ; ಏನು ಹೇಳಬೇಕು ಎಂಬುದೇ ಆಕೆಗೆ ತೋಚದಂತಾಗಿದೆ......' ಎಂದು ಸಮಾಧಾನ ಹೇಳಿದೆ. ಹರಿಶ್ಚಂದ್ರ ಒರಟು ನಗು ಬೀರಿದ.

ಇಬ್ಬರೂ ಬಸ್ ನಿಲ್ದಾಣದ ಕಡೆ ಹೊರಟೆವು. ಬಸ್ ಸಮಯ ತಿಳಿದಿರಲಿಲ್ಲ. ಅದೇ ದಿನ ಮರು ಪ್ರಯಾಣ ಮಾಡುವ ವಿಚಾರವೇ ನಮಗಿರಲಿಲ್ಲ. ಧಿಡೀರನೆ ಪ್ರಯಾಣ ಮಾಡುವುದು ಹರಿಶ್ಚಂದ್ರನಿಗೆ ಇಷ್ಟವಿರಲಿಲ್ಲ. ಅವನಿಗೆ ಎಲ್ಲವೂ ವ್ಯವಸ್ಥಿತವಾಗಿ ಆಗಬೇಕು. ಹಾಗಾಗಿ ಮುಖ ಧುಮುಗುಡುತ್ತಿತ್ತು.

*(ಮುಂದುವರಿಯುವುದು)*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018